# ಸಿದ್ಧಗಂಗಾ

ಸಂಪುಟ–೧೯ ಸಂಚಿಕೆ-೨ ಫೆಬ್ರವರಿ, ೧೯೮೩

ಸುಲಲಿತ ಪುಂಗನಾಚಲಕೆ ವಾಯವ್ಯದೊ ।
ಳೊಲುಮೆಯೊಳ್ ಯೋಜನಾಂತರದಿ ।
ಚಲುವೆತ್ತ ಕೇತ್ಸಮುದ್ರದ ಗ್ರಾಮದೆಡೆಯೊಂದು ।
ಜೆಳೆದು ಕಲ್ಲರೆ ಬಂಡೆಯಿಹುದು ॥ ೧

ಆಗ ಕಲ್ಲರೆ ಬಂಡೆಗೀಶನು ನಡೆತರ- ।
ಲಾಗಶರಣರೆಲ್ಲ ನೋಡಿ ।
ಈಗ ಲಗ್ಗಣಿ ಬಂದದೀಶನೆ ಮಜ್ಜನ ।
ವಾಗಗೈಬಹುದೆಂದರವರು ॥ ೨

ಭಜಕರ ನುಡಿ ಕೇಳಿ ಹರತನ್ನ ಪಾದಪಂ ।
ಕಜವ ಕಲ್ಲೊಳಗೂರಲಾಗಿ ।
ತ್ರಿಜಗತ್ಪಾವನ ತೀರ್ಥವುದ್ಭವಿಸಿತು ।
ನಿಜ ಸಿದ್ಧಗಂಗೆಯೆಂದೆನಿಸಿ ॥ ೩

ಗುರುಸಿದ್ಧಲಿಂಗನು ಕಲ್ಲುಬಂಡೆಯ ಮೇಲೆ ।
ಚರಣಾಂಕಿತ ಗೆಯ್ಯಲಲ್ಲಿ ।
ದುರಿತನಾಶನ ಸಿದ್ಧಗಂಗೆಯೆನ್ನುವ ತೀರ್ಥ ।
ಸುರತದಿಂದುದಿಸಿತಾಕ್ಷಣದಿ ॥ ೪

ವರಪುಣ್ಯಕರ ಸಿದ್ಧಗಂಗಾ ತೀರ್ಥವ ಕಂಡು !
ಪಿರಿಯರು ಸಹ ಲಿಂಗಾರ್ಚನೆಯ ।
ನೆರೆಗೆಯ್ಯುತಿರಲಭ್ರದೊಳು ದುಂದುಭಿಯನಾದ ।
ಕರಗೈದರ ಮರರುತ್ಸಹದಿ ॥ ೫

(ಕ್ರಿ. ಶ. ಸು. ೧೬೦) ಹೇರಂಬಕವಿ

# ಈ ಸಂಚಿಕೆಯಲ್ಲಿ



**ಸೂಚನೆ:** ಪುಟ 33'ರಲ್ಲಿ 34 ಎಂದು 34 ರಲ್ಲಿ 33 ಎಂಗು ಪ್ರಿಂಟ್ ಆಗಿರುತ್ತೆ. ವಾಚಕರು ಗಮನಿಸುವುದು. ಇದಕ್ಕಾಗಿ ವಿಷಾದಿಸುತ್ತೇವೆ.



# ಶ್ರೀವಾಣಿ

"ಕಳಬೇಡ" ಶರಣಸಮುದಾಯದಲ್ಲಿ ಇದಕ್ಕೆ ಕೊಟ್ಟಷ್ಟು ಅರ್ಥವ್ಯಾಪ್ತಿ ಪ್ರಾಯಃ ಮತ್ತಾವ ಧರ್ಮದಲ್ಲಿಯೂ ಕಂಡುಬರುವುದಿಲ್ಲ. ಪರರೊಡವೆಯನ್ನು ಕದಿಯುವುದು, ಕದಿಯಬೇಕೆಂದು ಮಾಡಿಕೊಂಡ ಮನಸ್ಸಿನ ಸಂಕಲ್ಪ, ಒಡವೆಯೊಡೆಯನನ್ನು ಹೇಳದೇ ಕೇಳದೇ ತರುವುದು, ನಾಳೆಗಾಗಿ ಮಾಡುವ ಸಂಗ್ರಹ, ನೇಮದ ಕೂಲಿಗಿಂತಲೂ ಅಗ್ಗವಾಗಿ ಅಪೇಕ್ಷಿಸುವ ದ್ರವ್ಯದಾಸೆ–ಇವೆಲ್ಲವೂ ಕಳ್ಳತನದ ರೂಪಾಂತರಗಳೇ. ಅದರಲ್ಲಿಯೂ "ಸಂಗ್ರಹ ಬುದ್ಧಿ" ಮತ್ತು "ಹಾಗದ ಕಾಯಕವ ಮಾಡಿಕೊಂಡು ಹಣವಡ್ಡವ ತಾ ಎಂಬ ಬುದ್ಧಿ" ಇವೆರಡೂ ಮಹಾಕಳ್ಳತನ. ಸಂದರ್ಭವೊಂದರಲ್ಲಿ ಬಸವಣ್ಣ ತನ್ನನ್ನು "ಬಲುಗಳ್ಳ"ನೆಂದು ಕರೆದುಕೊಂಡದ್ದು; ಶರಣೆ ಲಕ್ಕಮ್ಮ ಮನ ಇಮ್ಮನವಾಗಿ ಎಂದಿನ ಕಾಯಕಕ್ಕಿಂತಲೂ ಹೆಚ್ಚು ಅಕ್ಕಿಯನ್ನು ಆಯ್ದುತಂದ ಮಾರಯ್ಯನನ್ನು "ಎಂದಿನಂದದೆ ಸಾಕು ಮತ್ತೆ ಕೊಂಡುಹೋಗಿ ಅಲ್ಲಿಯೇಸುರಿ" ಎಂದು ಹೇಳಿದುದು ದ್ರವ್ಯದಾಸೆಯಿಂದ ನೇಮದ ಕೂಲಿಗಿಂತಲೂ ಹೆಚ್ಚು ತಂದ ಲಿಂಗಯ್ಯನನ್ನು "ನೀ ತಂದ ಅನ್ಯದ್ರವ್ಯಸಹಿತ ನೀನೆಲ್ಲಿಯಾದರೂ ಹೋಗು" ಎಂದು ಝುಂಕಿಸಿ ನುಡಿದ ನುಲಿಯ ಚಂದಯ್ಯನ ಪ್ರವರ್ತನೆ—ಮುಂತಾದುವುಗಳೇ ಇದಕ್ಕೆ ಉತ್ತಮ ನಿದರ್ಶನಗಳಾಗಿವೆ.

## "ಸಿದ್ಧಗಂಗಾ" ಮಾಸ ಪತ್ರಿಕೆ


ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ

* * *
ಸಹ ಸಂಪಾದಕರು
ಪಿ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *
ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *
ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *
ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *
ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *
ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ


### ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಸ್ವತಂತ್ರ ಭಾರತದ ಇಂದಿನ ದಿನದಿನದ ರಾಜಕೀಯ ಸ್ವರೂಪ ಬುದ್ಧಿಜೀವಿಗಳನ್ನು ತಬ್ಬಿಬ್ಬುಗೊಳಿಸುವಷ್ಟು ಸಮಸ್ಯಾತ್ಮಕವಾಗಿದೆ. ಒಂದೆಡೆ ಪ್ರಾದೇಶಿಕಮಮತೆ, ಭಾಷಾಂಧತೆ, ಪ್ರತ್ಯೇಕತಾಮನೋಭಾವಗಳೂ ಮತ್ತೊಂದೆಡೆ ರಾಷ್ಟ್ರವೇನಾದರೂ ಆಗಲಿ, ಪಕ್ಷ ಪ್ರತಿಪಕ್ಷಗಳು ತಂತಮ್ಮ ಬಲ ಛಲ ಮೇಲ್ಮೆ ಪಡೆಯಬೇಕೆಂಬ ದುರಭಿಮಾನ ಬೆಳೆಯತೊಡಗಿ ಸ್ವತಂತ್ರಭಾರತ ಆಶೋತ್ತರಗಳೆಲ್ಲ ಮಣ್ಣುಗೂಡಿಹೋಗತೊಡಗಿವೆ. ನಮ್ಮ ಜನ ಭಾರತದ ಹಿಂದಿನ ಚರಿತ್ರೆಯಿಂದ ಏನೂ ಪಾಠ ಕಲಿಯುಲಿಲ್ಲವೆನ್ನಿಸುತ್ತದೆ. ಗುಪ್ತವಂಶ ನಷ್ಟವಾದ ಬಳಿಕ ಚಿಕ್ಕ ಚಿಕ್ಕ ಹತ್ತಾರು ರಾಜ್ಯಗಳು ಉತ್ತರ ಭಾರತದಲ್ಲಿ ಹುಟ್ಟಿ ಪರಸ್ಪರ ಜಗಳದಲ್ಲಿ ತೊಡಗಿದಾಗ ಹೂಣ ಕಿರಾತರಂಥವರು ಮಂಗೋಲಿಯನ್ನರು ಇಲ್ಲಿ ದಾಳಿ ನಡೆಸಿ ಸಫಲರಾದರು. ೧೧ ನೇ ಶತಮಾನದಲ್ಲಿ ಸುಲಭವಾಗಿ ಇಲ್ಲಿ ಘಜನಿ ಮಹಮ್ಮದನು ಸುಗ್ಗಿ ೧೭ ಸಲ ದಾಳಿ ನಡೆಸಿ, ಅಪಾರ ಐಶ್ವರ್ಯ ಲೂಟಿ ಮಾಡಿದನು. ಮುಂದೆ ಕೆಲವೇ ವರ್ಷಗಳಲ್ಲಿ ಘೋರಿ ಮಹಮ್ಮದನು ರಾಜ್ಯವನ್ನೇ ಕಟ್ಟಿದನು. ಕ್ರಿ.ಶ. ೧೨೯೪ ರಲ್ಲಿ ಅಲ್ಲಾವುದೀನ್ ಖಿಲಜಿಯ ದಕ್ಷಿಣ ಭಾರತದ ದಾಳಿಯಾಗಲಿ, ಅವನ ಸರದಾರ ಮಲ್ಲಿಕ್ಕಾಫರನ ೧೩೦೯ ರಿಂದ ೧೩೧೧ ರ ವರೆಗಿನ ಭಯಾನಕವಾದ ದೆಹಲಿಯಿಂದ ರಾಮೇಶ್ವರದವರೆಗಿನ ಲೂಟಿಯಾಗಲಿ ಅಂದಿನ ಹೊಣೆಗೇಡಿ ಭಾರತೀಯರ ರಾಜಕೀಯ ಜೀವನದ ಕಹಿಫಲಗಳಲ್ಲದೆ ಮತ್ತೇನು? ಅಂದಿನ ಕರ್ನಾಟಕದ ಹೊಯ್ಸಳ, ದೇವಗಿರಿ, ಯಾದವರಾಜರ ಗತಿಯೇನಾಯಿತು? ದೊಡ್ಡ ರಾಜರ ಗತಿಯೇ ಹೀಗಾದಮೇಲೆ ಚಿಕ್ಕರಾಜರನ್ನಾರು ಕೇಳಬೇಕು? ಇವರಲ್ಲಿ ಶಕ್ತಿಯಿರಲಿಲ್ಲವೆಂದಲ್ಲ; ಶೂರರೆಲ್ಲ ಸತ್ತಿದ್ದರೆಂದಲ್ಲ; ಆಗಿನ ನೂರಾರು ಚಿಕ್ಕ ಚಿಕ್ಕ ಹೊಣೆಗೇಡಿ ರಾಜರ ಪರಸ್ಪರ ದ್ವೇಷಾಸೂಯೆಗಳು, ಧರ್ಮಾಂಧತೆಗಳು ಅಂದಿನ ಪ್ರಜಾ ವರ್ಗದ ಕಗ್ಗೊಲೆ ಮಾಡಿಸಿದವು. ಜನ ಐಶ್ವರ್ಯಹೀನರಾಗಿ ದಿಕ್ಕೆಟ್ಟು ಹರಿದಾಡಿ ಬದುಕಿದರೆ ಸಾಕೆನ್ನುವಂತೆ ಮಾಡಿದವು. ಒಂದು ಸಾವಿರ ವರ್ಷಗಳು ಭಾರತದ ಜನ ದಿಕ್ಕುತಪ್ಪಿ ಗೊತ್ತುಗುರಿಯಿಲ್ಲದೆ ಬಾಳಿ ಕೊನೆಗೊಮ್ಮೆ ಈ ಶತಮಾನದ ಮಧ್ಯಭಾಗದಲ್ಲಿ ಸ್ವತಂತ್ರ ಭಾರತ ಸ್ವರೂಪವನ್ನು ಕಂಡು ಭಾರತವಲ್ಲಿ ಹುದುಗಿದ್ದ ಹಿಂದಿನ ಭಾವಗಳ ಕಹಿಯನ್ನೆಲ್ಲ ಮರೆತು ಭವ್ಯಭಾರತ ನಿರ್ಮಾಣದ ಸುಂದರ ಕನಸನ್ನು ಕಂಡು ಹೆಜ್ಜೆಯಿಡತೊಡಗಿದರು. ೩೫ ವರ್ಷದಿಂದ ಸ್ವತಂತ್ರ ಭಾರತ ರಾಜಕೀಯ ಧುರೀಣರಾಗಲಿ, ಜನಸಮೂಹವಾಗಲಿ ಇಡುತ್ತಾ ಬಂದ ಹೆಜ್ಜೆಗಳು

(9 ನೇ ಪುಟ ನೋಡಿ)

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

ಪುಸ್ತಕಂ ವನಿತಾ ವಿತ್ತಂ ಪರಹಸ್ತಂ ಗತಂ ಗತಾ।
ಅಥವಾ ಪುನರಾಯಾತಂ ನಷ್ಟಂ ಭ್ರಷ್ಟಾಚ ಖಂಡಿತಾ॥

ಪುಸ್ತಕವು, ವನಿತೆಯೂ ಮತ್ತು ಹಣವು
ಪರರ ಕೈ ಸೇರಿದರೆ ಮರಳಿ ಬರವು.
ಮರಳಿದರೂ ಹರಿದಿದ್ದು, ಶೀಲಗೆಟ್ಟಿದ್ದು
ಕೊರೆಬಿದ್ದು ಹಾಳಾಗಿ ಇರದೆ ಇರವು.

ಕಾಕ ಆಹ್ವಯತೇ ಕಾಕಾನ್ ಯಾಚಕೋ ನ ತು
ಯಾಚಕಾನ್ ।
ಕಾಕ ಯಾಚಕಯೋರ್ಮಧ್ಯೇ ವರಂ ಕಾಕೋ ನ
ಯಾಚಕಃ ॥

ಕೂಗಿ ಕರೆವುದು ಕಾಗೆ ಕಾಗೆಗಳನು
ತಿರುಕ ಕರೆಯನು ಇತರ ತಿರುಕರನ್ನು
ಕಾಗೆ ತಿರುಕರ ಪೈಕಿ ಕಾಗೆಯೇ ಶ್ರೇಷ್ಠ
ತಿರುಕನಾದರೊ ನೀಚ, ಸ್ವಾರ್ಥಿ, ಭ್ರಷ್ಟ.

ನ ಕಶ್ಚಿತ್ಕಸ್ಯಚಿನ್ಮಿತ್ರಂ ನ ಕಶ್ಚಿತ್ಕಸ್ಯಚಿದ್ರಿಪುಃ।
ವ್ಯವಹಾರೇಣ ಮಿತ್ರಾಣಿ ಜಾಯಂತೇ ರಿಪವಸ್ತಥಾ॥

ಮಿತ್ರನೆಂಬುವನಿರನು ತಾನೆ ತಾನು
ಅಂತೆಯೇ ಶತ್ರುವೂ ನರನಿಗಿರನು
ನಿನ್ನ ನಡೆನುಡಿಯಿಂದ ದೊರೆಯುವನು ಸಖನು
ಅಂತೆಯೇ ಅರಿ ಕೂಡ ಅರಿಯೊ ನೀನು

'ಕಾವ್ಯಸುಧಾಪ್ರಿಯ' (ಕೆ. ಜಿ. ರಂಗಯ್ಯ)

ತಾಳಮೇಳ ತಪ್ಪಿಹೋಗತೊಡಗಿವೆ. ದೇಶದ ಜನಜೀವನ ಪ್ರಕ್ಷುಬ್ಧಗೊಂಡ ಸಾಗರದಂತಾಗಿ ಹೋಗಿದೆ. ರಾಜಕೀಯ ಧುರೀಣರೆನಿಸಿದವರು ತಾವು ಕಟ್ಟಿಕೊಂಡಿರುವ ನೂರಾರು ಪಕ್ಷ ಪಂಗಡಗಳ ಮೇಲ್ಮೆಗೆ, ಅಧಿಕಾರಕ್ಕೆ, ತಮ್ಮ ತಮ್ಮ ಜನಗಳ ಮೇಲ್ಮೆಗೆ, ಜಾತಿಮತಗಳ ಮೇಲ್ಮೆಗೆ ಹೆಣಗತೊಡಗಿರುವರಲ್ಲದೆ ಸಮಗ್ರ ರಾಷ್ಟ್ರದ ಬಂಧುರತೆಗೆ, ಆರ್ಥಿಕ ಮೇಲ್ಮೆಗೆ, ವೈಜ್ಞಾನಿಕೋತ್ಕರ್ಷಕ್ಕೆ ಹೆಣಗುತ್ತಿಲ್ಲವೆಂಬುದು ಎಂಥವನಿಗೂ ಅರ್ಥವಾಗುವ ವಿಷಯವಾಗಿದೆ. ಒಬ್ಬ ರಾಜಕೀಯ ಮುಖಂಡನಿಗೆ ಅಧಿಕಾರ ಸಿಕ್ಕದಿದ್ದಾಗ ಕೆಲವಾರು ಜನಗಳ ಒಂದು ಗುಂಪು ಕಟ್ಟಿ ಅದಕ್ಕೊಂದು ಹೆಸರಿಟ್ಟು, ಆಳುವ ಪಕ್ಷಕ್ಕೆ ಅಡ್ಡಗಾಲುಕೊಟ್ಟು ನಿಂದೆ ಅವಹೇಳನ ದೊಂಬಿಯಲ್ಲಿ ತೊಡಗುತ್ತಾನೆ. ಜನತೆ ಇವನ್ನೆಲ್ಲ ಕಂಡು ರೋಸಿಹೋದರೂ, ನಿಸ್ಸಹಾಕವಾಗಿದೆ. ಸಾಮಾನ್ಯ ಜನತೆಗೆ ಅಹನ್ಯಹನಿ ಜೀವನ ವ್ಯವಸ್ಥೆಯೇ ಸಮಸ್ಯೆಯಾಗಿದೆ. ಮೇಲಾಗಿ ರಾಜಕೀಯ ಮುಖಂಡರು ಸಾಕಿಕೊಂಡಿರುವ ಪುಂಡಪೋಕರಿಗಳ ಭಯ ; ಕಣ್ಣೆದುರಿಗೆ ಅನ್ಯಾಯ ನಡೆಯುತ್ತಿದ್ದರೂ ಅದನ್ನು ಜನತೆ ಪ್ರತಿಭಟಿಸಲು ಹೆದರುತ್ತಿದೆ. ಹಿಂದೆ ಪರಕೀಯರು ಈ ದೇಶವನ್ನು ಲೂಟಿಮಾಡಿಕೊಂಡು ಹೋಗುತ್ತಿದ್ದರೆ, ಇಂದು ದೇಶೀಯರೇ ದೇಶದ ಸಂಪತ್ತನ್ನು ಲೂಟಿಮಾಡುತ್ತಿದ್ದಾರೆ. ದೇಶದ ಆರ್ಥಿಕ ಹಂಚಿಕೆ ತುಂಬಾ ಅಶಾಸ್ತ್ರೀಯವಾಗಿ ಬೆಳೆದು ಬಡತನದ ರೇಖೆಯ ಕೆಳಗೆ ಹೆಚ್ಚು ಪ್ರಮಾಣದಲ್ಲಿ ಜನಜೀವನ ಇಳಿಯುತ್ತಿದೆ. ಮತ್ತೊಂದು ಕಡೆಯಲ್ಲಿ ಐಶ್ವರ್ಯವಂತರ ಸಂಖ್ಯೆ ಬೆಳೆಯುತ್ತಿದೆ. ಇದೆಲ್ಲವನ್ನು ತಡೆಗಟ್ಟಲು ಸಾಕಷ್ಟು ಶಾಸನಗಳು ಇದ್ದರೂ ಅವು ಕಾಗದದ ಮೇಲೆಯೇ ಕುಳಿತಿವೆ. ರಾಷ್ಟ್ರ ಹಾಳಾದರೂ ಚಿಂತೆಯಿಲ್ಲ ತಾನು ಒದುಕಿದರೆ ಸಾಕು ಎಂಬ ಮನೋಭಾವದ ಅಧಿಕಾರಿಗಳು, ವ್ಯಾಪಾರಿಗಳು ಇತ್ನಿತರ ರಾಜಕೀಯ ಮುಖಂಡರು ಐಶ್ವರ್ಯವನ್ನು ದುಂಡಗೆ ಮಾಡಿಕೊಳ್ಳುತ್ತಿದ್ದಾರೆ. ಹೀಗಾಗುವುದಕ್ಕೆ ಸಮರ್ಥ ಕೇಂದ್ರ ಹಾಗು ರಾಜ್ಯ ಸರಕಾರಗಳ ಕಾರ್ಯ ವಿಧಾನವೇ ಕಾರಣವಲ್ಲದೆ ಜನತೆ ಇನ್ನೇನನ್ನು ಹೇಳಲು ಸಾಧ್ಯ? ಪ್ರಜಾಪ್ರಭುತ್ವ ಭಾರತದ ಮಟ್ಟಿಗೆ ಇನ್ನೂ ಸಿದ್ಧಿಸಿ ಬರಲಿಲ್ಲ. ರಾಷ್ಟ್ರೀಯ ಸಮಸ್ಯೆಗಳ ಪರಿಹಾರಕ್ಕೆ ಸೂಕ್ತ ನಾಯಕರು ಹುಟ್ಟಿಬರಲಿಲ್ಲ ಎಂದೇ ಸಾಮಾನ್ಯ ಜನತೆ ಹೇಳಬೇಕಾಗುತ್ತದೆ.

---

ಸತ್ಯದ ಮನೆಯಲ್ಲಿ ಶಿವನಿರ್ಪನಲ್ಲದೇ,
ಅಸತ್ಯದ ಮನೆಯಲ್ಲಿ ಶಿವನಿರ್ಪನೆ ?
ಇಲ್ಲಿಲ್ಲ ನೋಡಿರೋ ! ಇದು ಕಾರಣ,
ನಮ್ಮ ಅಖಂಡೇಶ್ವರ ಲಿಂಗವನೊಲಿಸಬೇಕಾದೊಡೆ;
ಸತ್ಯವನೇ ಸಾಧಿಸಬೇಕು ಕಾಣಿರೋ !

---

# ಕ್ಷೇತ್ರವಾರ್ತೆ

ತಾ|| 8-3-83 ರಂದು ಭಾರತದ ಪಾದಯಾತ್ರಾ ಕೈಗೊಂಡಿರುವ ಅ.ಭಾ.ಜ ಅಧ್ಯಕ್ಷ ಶ್ರೀ ಚಂದ್ರಶೇಖರರವರು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಸಂಜೆ 6-30 ಕ್ಕೆ ಭೇಟಿ ನೀಡಿದರು. ಶ್ರೀ ಶ್ರೀಗಳವರ ಆಶೀರ್ವಾದವನ್ನು ಸ್ವೀಕರಿಸಿದ ಶ್ರೀಯುತರು ಸಭೆಯನ್ನು ಕುರಿತು ಮಾತನಾಡಿದರು. ಇಲ್ಲಿಗೆ ಸುಮಾರು 1400 ಕಿ.ಮೀ. ದೂರ



ಪ್ರಯಾಣ ಬೆಳಸಿದ ಉದ್ದೇಶ, ನಮ್ಮ ರಾಷ್ಟ್ರದ ಜನರ ಪರಿಚಯ, ಅವರ ಸಮಸ್ಯೆಯ ಅರಿವು ಮತ್ತು ಪರಿಹಾರ ಮಾರ್ಗ ಕಂಡು ಹಿಡಿಯುವುದೇ ಮುಖ್ಯವಾದುದು. ಶ್ರೀ ಕ್ಷೇತ್ರದಲ್ಲಿ ಪೂಜ್ಯ ಸ್ವಾಮೀಜಿಯವರ ದಿವ್ಯ ಮಾರ್ಗದರ್ಶನದಲ್ಲಿ ನೀವೆಲ್ಲಾ ವಿದ್ಯಾಭ್ಯಾಸ ಮಾಡುತ್ತಿರುವುದು ನಮ್ಮ ಪ್ರಾಚೀನ ಸಂಸ್ಕೃತಿ ನಾಗರೀಕತೆಯ ದ್ಯೋತಕವಾಗಿದೆ. ನೀವು ಉತ್ತಮವಾದ ರಾಷ್ಟ್ರದ ಯುವಶಕ್ತಿಯಾಗಿ ಬೆಳೆಯ ಬೇಕಾಗಿದೆ. ಪೂಜ್ಯರ ತಾತ್ತ್ವಿಕ ಧರ್ಮೋಪದೇಶ ನಿಮ್ಮ ಬಾಳಿನ ಕೈದೀವಿಗೆಯಾಗಲಿ. ನಮ್ಮ ಪ್ರಾಚೀನ ಪುಣ್ಯ ಪರಂಪರೆ ನಿರಂತರ ಸಾಗಿಬರಲೆಂದು ಆಶಿಸುತ್ತೇನೆ. ನಮ್ಮ ರಾಷ್ಟ್ರ ಸ್ವಾತಂತ್ರ್ಯವನ್ನು ಪಡೆದು 35 ವರ್ಷಗಳಾದರೂ ಬಡತನ ನಿವಾರಣೆಯಾಗಿಲ್ಲ ಬಡತನ ರೇಖೆಯ ಕೆಳಗೆ ಸು. ಶೇ 60 ರಷ್ಟು ಮಂದಿ ಒಪ್ಪತ್ತಿಗೂ ಅನ್ನವಿಲ್ಲದೆ ಕೊರಗ ಬೇಕಾಗಿದೆ. ದೇಶದಲ್ಲಿ ವಿಷಮ ಪರಿಸ್ಥಿತಿಗಳು ಉಲ್ಬಣಗೊಳ್ಳುತ್ತವೆ. ಮಹಾತ್ಮ ಗಂಧಿಜೀಯವರು ಲೋಕನಾಯಕ ಜಯಪ್ರಕಾಶ ನಾರಾಯಣರ ಕಲ್ಪಿತ ಕನಸ್ಸನ್ನು ಊರ್ಜಿತ ಗೊಳಿಸಬೇಕಾಗಿದೆ. ಆ ಪುಣ್ಯಾತ್ಮರ ಮಹದಾಶಯವನ್ನು ನಾವುಗಳು ಎಲ್ಲರೂ ಒಟ್ಟಿಗೆ ಸೇರಿ ಪೂರ್ಣಗೊಳಿಸಲು ಸಾಹಸ ಪ್ರವೃತ್ತರಾಗೋಣ. ಪೂಜ್ಯ ಸ್ವಾಮೀಜಿಯ ಆಶೀರ್ವಾದ ನಮ್ಮೆಲ್ಲರಿಗೂ ಇರಲೆಂದು ಆಶಿಸಿ ಮುಕ್ತಾಯ ಮಾಡುತ್ತೇನೆ. –ಎಂದು ತಿಳಿಸಿದರು.

# ವೀರಶೈವ ಪ್ರವಚನಕಾರರು

—ಗೊ. ರು. ಚನ್ನಬಸಪ್ಪ

೩೧) **ಕಾಡು ಸೆಟ್ಟಿಹಳ್ಳಿ ಲಿಂ. ಪಂಚಾಕ್ಷರಗವಾಯಿಗಳು :** ಹುಟ್ಟು ಗುರುಡರಾದ ಹಾನಗಲ್ ತಾಲ್ಲೂಕು ಕಾಡುಸೆಟ್ಟಿ ಹಳ್ಳಿ ಪಂಚಾಕ್ಷರ ಗವಾಯಿಗಳು ಕರ್ನಾಟಕ–ಹಿಂದುಸ್ತಾನೀ ಸಂಗೀತ ಪ್ರಪಂಚದಲ್ಲಿ ಮಹಾಕ್ರಾಂತಿಯನ್ನು ಮಾಡಿದ ಮಹಾಪುರುಷರು. ಹಾನಗಲ್ಲು ಕುಮಾರಸ್ವಾಮಿಗಳವರ ಕೃಪೆಗೆ ಬಾಲ್ಯದಲ್ಲಿಯೇ ಪಾತ್ರರಾದ ಶ್ರೀ ಗವಾಯಿಗಳು ಶ್ರೇಷ್ಠ ಸಂಗೀತದೊಡನೆ ಕೀರ್ತನೆ ಪುರಾಣ ಪ್ರವಚನಗಳನ್ನು ಮಾಡಿ ಅನುಪಮ ಸೇವೆ ಸಲ್ಲಿಸಿ ವೀರಶೈವ ಶರಣತತ್ತ್ವ ಪ್ರಚಾರ ಮಾಡಿದ್ದಾರೆ. ೨೦ನೆಯ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಸಂಗೀತ ಪ್ರಪಂಚದಲ್ಲಿ ಅದ್ಭುತ ಕ್ರಾಂತಿಯನ್ನು ಮಾಡಿದ ಕೀರ್ತಿ ಇವರದಾಗಿದೆ.

೩೨) **ಶ್ರೀ ನಿ.ಪ್ರ. ಮುಧೋಳದ ಮೃತ್ಯುಂಜಯ ಸ್ವಾಮಿಗಳು :** ಕಾಶಿಯಲ್ಲಿ ಅನೇಕ ವರ್ಷಗಳು ಪ್ರೌಢ ವ್ಯಾಸಂಗ ಮಾಡಿ ತಾಯ್ನಾಡಿಗೆ ಮರಳಿದ ಶ್ರೀಗಳವರು ಶರಣತತ್ತ್ವ ಪ್ರವಚನ ಮಾಡುವಲ್ಲಿ ನಿಷ್ಣಾತರು. ಪ್ರೌಢ ಶೈಲಿಯಲ್ಲಿ ವಿದ್ವಾಂಸರನ್ನು, ಸುಲಭ ಶೈಲಿಯಲ್ಲಿ ಸಾಮಾನ್ಯರನ್ನು ತಲೆದೂಗಿಸಬಲ್ಲ ಪ್ರವಚನ ಕಲೆ ಶ್ರೀಗಳಿಗೆ ಒಲಿದು ಬಂದಿದೆ. ಕಂಚಿನಂತಹ ಕಂಠದಿಂದ ಪ್ರವಚನ ಪ್ರಾರಂಭಿಸಿದರೆ ಸಭೆ ಮಂತ್ರ ಮುಗ್ಧತೆಯಿಂದ ಕೂಡಿರುತ್ತದೆನ್ನಬಹುದು.

೩೩) **ಗುದಿಗೇರಿ ಬಸವಲಿಂಗ ಶಾಸ್ತ್ರಿಗಳು :** ಬೋಧನಾಸಾಮರ್ಥ್ಯ, ಪುರಾಣ ಪ್ರವಚನಗಳ ಶಕ್ತಿಗಳಿಂದ ತಮ್ಮ ಸ್ಥಾನ ಭದ್ರಪಡಿಸಿಕೊಂಡಿರುವ ಶ್ರೀ ಶಾಸ್ತ್ರಿಗಳು ಆಚಾರನಿಷ್ಠರು, ಸುಸಂಸ್ಕೃತರು, ಶಾಸ್ತ್ರೀಯವಾಗಿ ವಿಷಯ ಪ್ರತಿಪಾದಿಸುವಲ್ಲಿ ಒಲವುಳ್ಳವರು. ಚಿತ್ರದುರ್ಗ, ಹಾವೇರಿ ಮುರುಘಾಮಠಗಳಲ್ಲಿ ಅನೇಕ ವರ್ಷ ಇವರ ಪುರಾಣ ಪ್ರವಚನಗಳು ನಡೆದಿವೆ.

೩೪) **ಶ್ರೀ ನಿ. ಪ್ರ. ರುದ್ರಸ್ವಾಮಿಗಳು, ಕರ್ಜಗಿ :** ಧಾರವಾಡದ ಮುರುಘಾಮಠದ ಮೃತ್ಯುಂಜಯ ಮಹಾಸ್ವಾಮಿಗಳವರ ಕೃಪೆಗೆ ಬಾಲ್ಯದಿಂದಲೂ ಪಾತ್ರರಾದ ಶ್ರೀಗಳು ಕರ್ಜಗಿ ವಿರಕ್ತಮಠಾಧ್ಯಕ್ಷರಾಗಿ ತಮ್ಮ ಪುರಾಣಪ್ರವಚನ, ಶಿವಾನುಭವ ಪ್ರವಚನ ಕಾರ್ಯಕ್ರಮಗಳಿಂದ ಧಾರ್ಮಿಕ ಲೋಕಕ್ಕೆ ಚಿರಪರಿಚಿತರಾಗಿದ್ದಾರೆ.

೩೫) ಪಂಡಿತ ಚನ್ನಪ್ಪ ಎರೇಸೀಮೆ, ಬೆಂಗಳೂರು : ಉತ್ತಮ
ವರ್ಗದ ಬೋಧಕರಾಗಿ, ಲೇಖಕರಾಗಿ, ಪತ್ರಿಕಾ ಸಂಪಾದಕರಾಗಿ, ಗ್ರಂಥಕರ್ತರಾಗಿ
ಸಮಾಜಸೇವೆಯನ್ನು ಮಾಡಿದ ಪಂಡಿತರು ಕಳೆದ ೪೦ ವರ್ಷ ಮೊದಲ್ಗೊಂಡು ತಮ್ಮ
ಕೀರ್ತನೆ, ಪುರಾಣಪ್ರವಚನಗಳಿಂದ ಕರ್ನಾಟಕದಲ್ಲಿ ಖ್ಯಾತರಾಗಿದ್ದಾರೆ. ಚಿತ್ರದುರ್ಗ
ಸಿದ್ಧಗಂಗೆ, ಬೆಂಗಳೂರು ಮೊದಲಾದ ಸ್ಥಳಗಳಲ್ಲಿ ಇವರ ಅನೇಕ ಕೀರ್ತನೆ, ಪುರಾಣ
ಪ್ರವಚನಗಳು ನಡೆದಿವೆ. ಬೆಂಗಳೂರು ಆಕಾಶವಾಣಿಯಲ್ಲೂ ಇವರ ಕೀರ್ತನೆ ಮತ್ತು
ಭಾಷಣ ಕಾರ್ಯಕ್ರಮಗಳು ಅನೇಕ ಸಲ ಬಿತ್ತರಗೊಂಡಿವೆ.

೩೬) ಹುಕ್ಕೇರಿ ಬಾಳಪ್ಪ : ಶರಣರ ವಚನಗಳು ಮತ್ತು ಜಾನಪದ
ಸಾಹಿತ್ಯವನ್ನು ತಮ್ಮಸುಶ್ರಾವ್ಯವಾದ ಕಂಠದ ಮೂಲಕ ಕಳೆದ ನಲ್ವತ್ತು ನಲ್ವತ್ತೈದು
ವರ್ಷಗಳಿಂದ ಹಾಡಿ, ಕನ್ನಡಿಗರನ್ನು ತಣಿಸಿದ ಹುಕ್ಕೇರಿ ಬಾಳಪ್ಪನವರ ಕಲಾಸೇವೆ
ಅನುಪಮವಾದುದು. ಕನ್ನಡನಾಡಿನ ಸಮಸ್ತ ವೀರಶೈವ ಮಠಾಧಿಪತಿಗಳು ಬಾಳಪ್ಪ
ನವರ ಸೇವೆಯನ್ನು ಪಡೆದಿದ್ದಾರೆನ್ನಬಹುದು.

೩೭) ಲಿಂ. ಪಗಡದಿನ್ನಿ ಸನ್ನಪ್ಪಶಾಸ್ತ್ರಿಗಳು, ಸಿಂಧನೂರು : ಇವರು
ಒಳ್ಳೆಯ ಪ್ರವಚನ ಪಟುಗಳು. ನವಮುಗ್ಧಲೀಲೆ, ತ್ರಿಷಷ್ಠಿಪುರಾತನರ ಚರಿತ್ರೆ,
ವೇದಾಂತಪಟಲ, ಶಿಖಾಧಾರಣ ಖಂಡನ ಮುಂತಾದ ಗ್ರಂಥರಚನೆ ಮಾಡಿರುವುದರ
ಜೊತೆಗೆ ನೈಜಾಂ ಕರ್ನಾಟಕಭಾಗದಲ್ಲಿ ಇವರ ಪುರಾಣಪ್ರವಚನ ಕಾರ್ಯಕ್ರಮಗಳು,
ಶಿವಾನುಭವಪ್ರವಚನ ಕಾರ್ಯಕ್ರಮಗಳು ವಿಶೇಷವಾಗಿ ಆಗಿವೆ.

೩೮) ಉಣಕಲ್ಲು ಶಿಖಾಮಠದ ವಿರೂಪಾಕ್ಷಶಾಸ್ತ್ರಿ : ಉದ್ದಾಮ
ಪಂಡಿತರು, ತರ್ಕಶಾಸ್ತ್ರಜ್ಞರು, ಇವರು ಎರಡು ಮೂರು ಗ್ರಂಥರಚನೆ ಮಾಡಿರುವು
ದಲ್ಲದೆ ಉತ್ತಮ ಪುರಾಣಪ್ರವಚನಕಾರರೆಂದು ಹುಬ್ಬಳ್ಳಿ ಧಾರವಾಡ ಭಾಗದಲ್ಲಿ
ಪ್ರಖ್ಯಾತರಾಗಿದ್ದಾರೆ,

೩೯) ಅಸ್ಥಾನವಿದ್ವಾನ್ ನಂಜುಂಡಾರಾಧ್ಯರು, ಮೈಸೂರು : ಉತ್ತಮ
ಸಂಸ್ಕೃತ ಬೋಧಕರು. ಅನೇಕ ಗ್ರಂಥರಚನೆ, ಸಂಶೋಧನೆ, ಸಂಪಾದನೆಗಳಿಂದ
ಪ್ರಖ್ಯಾತರಾದ ಇವರು ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನ ಶಕ್ತಿವಿಶಿಷ್ಟಾ
ದ್ವೈತ ಮಹಾ ಮಹೋಪಾಧ್ಯಾಯರಾಗಿ ನಿವೃತ್ತಿಗೊಂಡು ಈಗ ಸಾಹಿತ್ಯ ಸೇವೆ
ಮಾಡುತ್ತಿದ್ದಾರೆ. ಪುರಾಣಪ್ರವಚನ, ಉಪನ್ಯಾಸಗಳಿಂದ ತಮ್ಮ ಜ್ಞಾನವನ್ನು ಜನತೆ
ಯಲ್ಲಿ ಹರಡಿದ್ದಾರೆ.

೪೦) ಪಂಡಿತ ಕೆ. ಪಿ. ಶಿವಲಿಂಗಯ್ಯ, ಬೆಂಗಳೂರು ; ಶ್ರೀಯುತರು
ಜೂನಿಯರ್ ಕಾಲೇಜೊಂದರ ಶಿಕ್ಷಕರಾಗಿದ್ದಾರೆ. ಅನೇಕ ಗ್ರಂಥರಚನೆ ಮಾಡಿದ

ಇವರು ಪುರಾಣಪ್ರವಚನ, ಭಾಷಣ, ಲೇಖನಗಳಿಂದ ಕರ್ನಾಟಕದಲ್ಲಿ ಪ್ರಸಿದ್ಧರಾಗಿದ್ದಾರೆ. ಶೂನ್ಯ ಸಂಪಾದನೆಯ ಪ್ರವಚನ ಇವರಿಗೆ ಅಚ್ಚುಮೆಚ್ಚು. ಇವರ ಸೇವೆಯನ್ನು ಗಮನಿಸಿ ೧೯೮೦ ರಲ್ಲಿ ಸಾರ್ವಜನಿಕರು ಇವರಿಗೆ ಸನ್ಮಾನ ಮಾಡಿದ್ದಾರೆ.

೪೧. ಲಿಂ|| **ಶ್ರೀ ಶಿವದೇವ ಶಾಸ್ತ್ರಿ, ದೊಡ್ಡಬಳ್ಳಾಪುರ:** ಪಂಡಿತರೂ, ನಾಟ್ಯಕಲಾಕೋವಿದರೂ ಎನಿಸಿದ್ದ ಶಾಸ್ತ್ರಿಗಳು ಉತ್ತಮ ಸಂಗೀತದೊಡನೆ ಶಿವಕೀರ್ತನೆಗಳನ್ನು ಮಾಡುತ್ತ ಶರಣತತ್ತ್ವ ಪ್ರಚಾರ ಮಾಡಿದ್ದಾರೆ. ಮೈಸೂರಿನ ಪ್ರಸಿದ್ಧ ಕೀರ್ತನಕಾರರಾದ ಲಿಂ. ಶಿವಪ್ಪ ಶಾಸ್ತ್ರಿಗಳ ನಂತರ ಇವರ ಶಿವಕೀರ್ತನಗಳೇ ಪ್ರಸಿದ್ಧವಾದವುಗಳು.

೪೨. **ಹುಣಸಘಟ್ಟದ ಶ್ರೀ ನಂಜುಂಡಾರಾಧ್ಯರು:** ಶಿವಕಥೆಗಳನ್ನು ಮಾಡುವುದರಲ್ಲಿ ಬಲ್ಲಿದರು. ಭಕ್ತಿಪ್ರಧಾನವಾದ ಅನೇಕ ಕಥೆಗಳನ್ನು ಕರ್ನಾಟಕವನ್ನೆಲ್ಲ ಸುತ್ತಿ ಮಾಡಿದ್ದಾರೆ. ಶ್ರೀ ಎಚ್. ಎನ್. ಶಿವಲಿಂಗಸ್ವಾಮಿ ಹಿರೇಮಠ ಅವರು ಇವರ ಮಕ್ಕಳು.

೪೩. **ಶ್ರೀ ಶಿವಲಿಂಗಸ್ವಾಮಿ ಹಿರೇಮಠ:** ಬಾಲ್ಯದಲ್ಲಿ ನಾಟಕ ಕಲೆಯಲ್ಲಿ ಆಸಕ್ತಿ ವಹಿಸಿದ್ದ ಇವರು ಅನಂತರ ತಮ್ಮ ತಂದೆ ಹುಣಸಘಟ್ಟದ ನಂಜುಂಡಾರಾಧ್ಯರಿಂದ ಕೀರ್ತನ ಕಲೆಯನ್ನು ಕಲಿತು ಕರ್ನಾಟಕದಲ್ಲೆಲ್ಲ ಸಂಚರಿಸಿ ಕೀರ್ತನಮಾಡಿ ಪ್ರಸಿದ್ಧಿ ಪಡೆದಿದ್ದಾರೆ. ಬೆಂಗಳೂರು ಆಕಾಶವಾಣಿಯೂ ಇವರ ಎಷ್ಟೋ ಕಥೆಗಳನ್ನು ಪ್ರಸಾರ ಮಾಡಿದೆ. ಚಿತ್ರದುರ್ಗ, ಬಾಳೆಹೊನ್ನೂರು ಶ್ರೀಗಳವರಿಂದ ಸನ್ಮಾನಿತರಾಗಿ ಅನೇಕ ಬಿರುದು, ಮೆಡಲ್‌ಗಳನ್ನು ಪಡೆದಿದ್ದಾರೆ.

೪೪. **ಲಿಂ. ಪಂಡಿತ ಹೆಚ್. ಎಂ. ರಾಮಾರಾಧ್ಯ, ಬೆಂಗಳೂರು:** ಉತ್ತಮ ಬೋಧಕರೂ, ಗಾಯಕರೂ, ಲೇಖಕರೂ, ಗ್ರಂಥಕರ್ತರೂ ಆಗಿ ಖ್ಯಾತಿಗೊಂಡಿದ್ದ ರಾಮಾರಾಧ್ಯರು ಶಿವಕೀರ್ತನಕಲೆಯಲ್ಲೂ ನಿಷ್ಣಾತರಾಗಿದ್ದರು. ಸುಶ್ರಾವ್ಯವಾದ ಕಂಠದಿಂದ ಪುರಾಣ ಪ್ರವಚನ ಮಾಡುವುದು ಇವರ ಹವ್ಯಾಸಗಳಲ್ಲಿ ಒಂದು. ಇವರು ಅನೇಕ ಗೀತಿರೂಪಕಗಳನ್ನು ರಚಿಸಿ ಯಶಸ್ವಿಯಾಗಿ ಪ್ರದರ್ಶನಗೊಳಿಸುತ್ತಿದ್ದರು.

೪೫) **ಗಮಕ ಕಲಾನಿಧಿ ಜೊಳದ ರಾಶಿ ದೊಡ್ಡನ ಗೌಡರು:** ಉತ್ತಮ ಮಟ್ಟದ ಗಮಕಿಗಳೂ, ಪುರಾಣ ಪ್ರವಚನಕಾರರೂ ಆಗಿ ನಾಡಿನಾದ್ಯಂತ ಖ್ಯಾತಿಗೊಂಡಿರುವ ದೊಡ್ಡನ ಗೌಡರು ಕವಿಗಳೂ ಆಗಿದ್ದಾರೆ. ಸುಶ್ರಾವ್ಯವಾದ ಕಂಠಶ್ರೀಯಿಂದ ಇವರು ಮಾಡುವ ಶೂನ್ಯಸಂಪಾದನೆಯ ಪ್ರವಚನ ಜನತೆಯಲ್ಲಿ ಆಶಾದೀಪವನ್ನು ಹೊತ್ತಿಸುವಂತಿರುತ್ತದೆ. ಇದಲ್ಲದೆ ಇವರು ಉತ್ತಮ ವರ್ಗದ

ನಟರೂ, ನಾಟಕ ಕರ್ತೃಗಳೂ ಆಗಿದ್ದಾರೆ. ಧಾರವಾಡದ ಲಿಂ. ಮೃತ್ಯುಂಜಯ ಸ್ವಾಮಿಗಳವರ ಕೃಪೆಗೆ ಪಾತ್ರರಾದ ಇವರ ಕಲಾಸೇವೆ ಅನುಪಮವಾದುದು.

೪೬) **ಶ್ರೀ ಸಿ. ವ. ಚನ್ನಬಸವೇಶ್ವರ, ಬಳ್ಳಾರಿ :** ಒಳ್ಳೆಯ ಲೇಖಕರೂ, ಗ್ರಂಥಕರ್ತೃಗಳೂ, ಗ್ರಂಥಸಂಪಾದಕರೂ ಆಗಿರುವ ಚೆನ್ನಬಸವೇಶ್ವರರು ಪುರಾಣ ಪ್ರವಚನದಲ್ಲಿ ಬಲ್ಲಿದರು. ಬಳ್ಳಾರಿ ಪ್ರಾಂತದಲ್ಲಿ ಇವರ ಅನೇಕ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ.

೪೭) **ಶ್ರೀ ರೇವಣಸಿದ್ಧೇಶ್ವರ ಶಾಸ್ತ್ರಿ :** ಗದಗಿನ ಡಾ|| ಪುಟ್ಟರಾಜ ಗವಾಯಿಗಳಲ್ಲಿ ಸಂಗೀತಾಭ್ಯಾಸಮಾಡಿ, ಕೀರ್ತನ ಕಲೆಯನ್ನು ಮೈಗೂಡಿಸಿಕೊಂಡಿರುವ ಶ್ರೀಯುತರು ಕರ್ನಾಟಕದಲ್ಲೆಲ್ಲ ಸಂಚರಿಸಿ ಶಿವಕೀರ್ತನೆ ಮಾಡುತ್ತಿದ್ದಾರೆ. ಇವರು ಉತ್ತಮ ವರ್ಗದ ನಟರೂ ಆಗಿದ್ದಾರೆ. ಚಲನಚಿತ್ರವೊಂದರಲ್ಲಿ ನಟಿಸಿರುವುದಾಗಿ ತಿಳಿದು ಬರುತ್ತದೆ.

೪೮) **ಶ್ರೀ ಬಿ. ಮಹಾದೇವ ಶಾಸ್ತ್ರಿ, ಬೆಂಗಳೂರು :** ಕೀರ್ತನೆ ಕಲೆಯನ್ನು ಅಭ್ಯಾಸ ಮಾಡಿ ಬೆಂಗಳೂರು ಸುತ್ತಮುತ್ತಣ ಪ್ರದೇಶದಲ್ಲಿ ಶಿವಕೀರ್ತನೆ ಪುರಾಣ ಪ್ರವಚನ ಮಾಡುತ್ತಿರುವ ಮಹದೇವ ಶಾಸ್ತ್ರಿ ಒಳ್ಳೆಯ ಗಮಕಿಗಳೂ ಆಗಿದ್ದಾರೆ.

೪೯) **ಶಿವಯೋಗ ಮಂದಿರದ ಲಿಂ. ಬಸವಲಿಂಗ ಶಾಸ್ತ್ರಿಗಳು :** ಸುಮಾರು ೪೦-೫೦ ವರ್ಷಗಳ ಹಿಂದೆ ಕೀರ್ತನ ಕಲೆಯನ್ನು ವಿದ್ವತ್ಪೂರ್ಣವಾಗಿ ಪ್ರಚಾರಗೊಳಿಸುತ್ತಿದ್ದ ಬಸವಲಿಂಗ ಸ್ವಾಮಿಗಳು ಮಹಾಪಂಡಿತರು, ಆಚಾರನಿಷ್ಠರು, ಶಾಸ್ತ್ರ ಜ್ಞಾನವನ್ನು ಚೆನ್ನಾಗಿ ಪಡೆದಿದ್ದ ಇವರ ಕೀರ್ತನ ಮತ್ತು ಪ್ರವಚನ ಕಾರ್ಯಕ್ರಮಗಳು ವಿದ್ವಾಂಸಲೋಕಕ್ಕೆ ರಸಪೌತಣಗಳಂತಿರುತ್ತಿದ್ದವು. ಹಾನಗಲ್ಲು ಕುಮಾರ ಸ್ವಾಮಿಗಳು ಮತ್ತು ಹಾವೇರಿ ಹುಕ್ಕೇರಿ ಮಠದ ಶಿವಬಸವಸ್ವಾಮಿಗಳ ಕೃಪೆಗೆ ಪಾತ್ರರಾಗಿದ್ದರು.

೫೦) **ಶ್ರೀ ಸಿದ್ಧೇಶ್ವರ ಸ್ವಾಮಿಗಳು, ಜ್ಞಾನಯೋಗಾಶ್ರಮ, ವಿಜಾಪುರ :** ಶ್ರೀಗಳವರು ಬಹುಶ್ರುತ ವಿದ್ವಾಂಸರು. ಇವರ ಪ್ರವಚನ ಕಾರ್ಯಕ್ರಮಗಳು ಪಂಡಿತ ಪಾಮರರಿಗೆಲ್ಲ ಮೆಚ್ಚುಗೆಯಾಗುವಂತಹವು. ತರ್ಕಬದ್ಧವಾದ ಇವರ ಶೈಲಿ ಅನ್ಯಾದೃಶ, ಉತ್ತರ ಕರ್ನಾಟಕದ ವಿವಿಧ ಕಡೆಗಳಲ್ಲಿ ಇವರ ವೀರಶೈವ ಧರ್ಮ ತತ್ತ್ವಗಳ ಬಗೆಯ ಪ್ರವಚನಗಳು ನಡೆಯುತ್ತಿರುತ್ತವೆ.

೫೧ ಶ್ರೀ ಶಂಭುಲಿಂಗ ಶಿವಾಚಾರ್ಯರು, ಹಲ್ಯಾಳ: ಪರಿಣಾಮಕಾರಿ ಪ್ರವಚನ ಕಾರ್ಯಕ್ರಮ ನಡೆಸಿಕೊಡುವಲ್ಲಿ ಶ್ರೀ ಶಂಭುಲಿಂಗ ಶಿವಾಚಾರ್ಯರ ಹೆಸರು ಉತ್ತರ ಕರ್ನಾಟಕದಲ್ಲಿ ಜನಜನಿತ.

೫೨ ಸುರಕೋಡದ ಶ್ರೀ ವೀರಯ್ಯನವರು: ದ್ಯಾಂಪುರದ ಬಸವಲಿಂಗ ಶಾಸ್ತ್ರಿಗಳ ಶಿಷ್ಯರಾದ ಶ್ರೀ ವೀರಯ್ಯನವರು ಕನ್ನಡ ಸಂಸ್ಕೃತ ಭಾಷಾಜ್ಞಾನವನ್ನು ಸಾಕಷ್ಟು ಪಡೆದು ಉತ್ತರ ಕರ್ನಾಟಕದಲ್ಲಿ ಶಿವಕೀರ್ತನೆಗಳ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಾ ತಮ್ಮ ಪಾಲಿನ ಸೇವೆ ಸಲ್ಲಿಸುತ್ತಿದ್ದಾರೆ. ಸಂಗೀತದಲ್ಲೂ ಬಲ್ಲಿದರು.

೫೩ ಹಿರೇಹಾಳು ಶ್ರೀ ವೀರಯ್ಯನವರು: ಧಾರವಾಡ ಜಿಲ್ಲಾ ರೋಣ ತಾಲ್ಲೂಕಿನ ಹಿರೇಹಾಳಿನ ಶ್ರೀವೀರಯ್ಯನವರು ಶ್ರೀಶಿವಯೋಗಮಂದಿರದಲ್ಲಿ ಸಾಕಷ್ಟು ಅಭ್ಯಾಸಮಾಡಿ, ಶಿವಕೀರ್ತನೆಗಳ ಕಾಯಕದಿಂದ ಜೀವಿಸುತ್ತಿದ್ದಾರೆ. ಉತ್ತರ ಕರ್ನಾಟಕದಲ್ಲಿ ಇವರ ಶಿವಕೀರ್ತನೆಗಳು ವಿಶೇಷವಾಗಿ ಜರುಗುತ್ತಿವೆ.

೫೪ ಗುಡ್ಡದಪ್ಪ ಮಾಸ್ತರ ಬೆಳಗೆರೆ: ಚನ್ನಗಿರಿ ತಾಲ್ಲೂಕು ಬೆಳಗೆರೆ ಗುಡ್ಡದಪ್ಪ ಮಾಸ್ತರರು ಒಳ್ಳೆಯ ಪ್ರವಚನಕಾರರೆಂದು ಖ್ಯಾತಿವೆತ್ತಿದ್ದಾರೆ. ಶಿವಮೊಗ್ಗ ಚಿತ್ರದುರ್ಗ ಜಿಲ್ಲೆಗಳ ಅನೇಕ ಕಡೆ ಇವರ ಪ್ರವಚನ ಕಾರ್ಯಕ್ರಮಗಳು ಜರುಗುತ್ತಿರುತ್ತಿವೆ.

೫೫ ಶ್ರೀ ರೇಣುಕಾರಾಧ್ಯರು, ಶೀತಕಲ್ಲು: ತುಮಕೂರು ಜಿಲ್ಲಾ ಶೀತಕಲ್ಲಿನ ಶ್ರೀಯುತ ಆರಾಧ್ಯರು ಕೀರ್ತನಕಲೆಯಲ್ಲಿ ನಿಷ್ಣಾತರು. ಜೀವಿತದ ಕೊನೆಯವರೆಗೂ ಇವರು ಕೀರ್ತನ ಕಾರ್ಯವನ್ನೇ ನೆಮ್ಮಿ ಬಾಳಿದವರು. ಇವರು ರಾಜಶೇಖರ ವಿಳಾಸ, ಶಬರಶಂಕರ ವಿಳಾಸ ಕಥೆಮಾಡುವುದರಲ್ಲಿ ವಿಶೇಷ ಆಸಕ್ತಿ ತೋರಿಸುತ್ತಿದ್ದರು.

೫೬ ಲಿಂ. ಗಂಗಾಧರಯ್ಯ, ಎಲಚಗೆರೆ: ತುಮಕೂರು ಜಿಲ್ಲಾ ಎಲಚಗೆರೆ ಗಂಗಾಧರಯ್ಯನವರು ಶಿವಕೀರ್ತನೆಗಳನ್ನು ಮಾಡಿ ಸೇವೆ ಮಾಡಿದವರಲ್ಲಿ ಒಬ್ಬರು.

೫೭ ಸೋಸಲೆ ಶಿವಸ್ವಾಮಿ: ಟಿ. ನರಸೀಪುರ ತಾಲ್ಲೂಕಿನ ಚಿದರಹಳ್ಳಿ ಶಿವಸ್ವಾಮಿಯವರು ಉತ್ತಮ ಪ್ರವಚನಕಾರರೆಂದು ಆ ಭಾಗದಲ್ಲಿ ಪ್ರಖ್ಯಾತರಾಗಿದ್ದಾರೆ.

೫೮ ಶ್ರೀ ಗುರುಸ್ವಾಮಿ ಕಲಕೇರಿ: ಪಂಚಾಕ್ಷರಿ ಗವಾಯಿಗಳಲ್ಲಿ ಸಂಗೀತಾಭ್ಯಾಸಮಾಡಿದ ಶ್ರೀಯುತರು ಮಧುರವಾದ ಸಂಗೀತದೊಡನೆ ಶಿವಕೀರ್ತನೆಗಳನ್ನು

ಉತ್ತರ ಕರ್ನಾಟಕದಲ್ಲಿ ನಡೆಸಿಕೊಡುತ್ತಿದ್ದರು.

೫೯ **ಶ್ರೀ ಸಿದ್ಧಲಿಂಗಶಾಸ್ತ್ರಿ, ಹೊಸಮಠ, ಗದಗ:** ತಕ್ಕಮಟ್ಟಿಗೆ ಸಂಸ್ಕೃ ಇಂಗ್ಲಿಷ್ ಭಾಷೆಯ ಪರಿಚಯವಿರುವ ಶ್ರೀ ಶಾಸ್ತ್ರಿಗಳು ಉತ್ತರ ಕರ್ನಾಟಕದ ಅನೇ ಸ್ಥಳಗಳಲ್ಲಿ ಪುರಾಣ ಪ್ರವಚನ, ಕೀರ್ತನ ಕಾರ್ಯ ಕ್ರಮಗಳನ್ನು ನಡೆಸಿಕೊಡುತ್ತ ತಮ್ಮ ಪಾಲಿನ ಸೇವೆ ಮಾಡುತ್ತಿದ್ದಾರೆ. ಇವರು ಒಂದೆರಡು ಚಿಕ್ಕ ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ.

೬೦ **ಸಾಲಂಕಿಮಠದ ಎಸ್. ಎಂ. ಷಡಕ್ಷರಸ್ವಾಮಿ, ಮಲೆಬೆನ್ನೂರು** ಪ್ರಾಥಮಿಕಶಾಲಾ ಉಪಾಧ್ಯಾಯರಾದ ಇವರು ಪುರಾಣ ಪ್ರವಚನ, ಕಾವ್ಯವಾಚ ಕೀರ್ತನ ಕಲೆಗಳನ್ನು ಅಭ್ಯಾಸಮಾಡಿ, ಅನೇಕ ಕಡೆ ಶಿವಕೀರ್ತನೆ, ಕಾವ್ಯವಾಚ ಗಳನ್ನೂ ಮಾಡುತ್ತಿದ್ದಾರೆ. ಇವರಿಗೆ ಅನೇಕಕಡೆ ಸಾರ್ವಜನಿಕ ಸನ್ಮಾನಗಳೂ ನಡೆ ವೆಯೆಂದು ತಿಳಿದುಬರುತ್ತದೆ.

೬೧ **ಶ್ರೀ ಟಿ. ಎಂ. ಚಂದ್ರಶೇಖರಶಾಸ್ತ್ರಿಗಳು, ದಾವಣಗೆರೆ:** ಗದ ಪುಟ್ಟರಾಜ ಗವಾಯಿಗಳಲ್ಲಿ ಸಂಗೀತ ಮತ್ತು ಶಿವಕೀರ್ತನ ಕಲೆಯನ್ನು ಅಭ್ಯಾ ಮಾಡಿದ ಶ್ರೀಯುತರು ಕರ್ನಾಟಕದ ಅನೇಕ ಕಡೆಗಳಲ್ಲಿ ಸಂಚರಿಸಿ ಶಿವಕೀರ್ತ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದಾರೆ ಇವರು ಅನೇಕ ಸ್ತೋತ್ರ ಗೀತೆಗಳ ಪ್ರಕಟಿಸಿದ್ದಾರೆ.

೬೨ **ಶ್ರೀ ಟಿ. ಎಂ. ಪಂಚಾಕ್ಷರಿ, ದಾವಣಗೆರೆ:** ಶ್ರೀ ಟಿ. ಎಂ. ಚಂ ಶೇಖರ ಶಾಸ್ತ್ರಿಗಳ ಕುಮಾರನಾದ ಇವನು ಬಾಲ್ಯದಲ್ಲಿಯೇ ಅಂದರೆ ೬ನೆಯ ವ ದಲ್ಲಿಯೇ ಕೀರ್ತನೆಮಾಡಿ ಜನವನ್ನು ಬೆರಗುಗೊಳಿಸಿದವನು. ೧೯೬೭ರಲ್ಲಿ ಜನ್ಮವೆತ್ತಿ ಇವನು ಈಗಾಗಲೇ ಕರ್ನಾಟಕದ ಅನೇಕ ಕಡೆ ಉತ್ತಮ ಶಿವಕೀರ್ತನೆಯ ಕಾ ಕ್ರಮಗಳನ್ನು ನಡೆಸಿಕೊಡುತ್ತಿದ್ದಾನೆ. ಅನೇಕ ಬಿರುದು ಬಾವಲಿಗಳೂ ಇವ ಸಾರ್ವಜನಿಕರಿಂದ ಲಭ್ಯವಾಗಿವೆ. ಬೆಂಗಳೂರು, ಧಾರವಾಡ ಆಕಾಶವಾಣಿಗ ಇವನ ಕೀರ್ತನೆಗಳನ್ನು ಬಿತ್ತರಿಸಿವೆ.

೬೩ **ಶ್ರೀ ಶಿವಯೋಗಿಶಾಸ್ತ್ರಿ ಗಡ್ಡದಮಠ, ದೇವಗಿರಿ:** ಹಾವೇರಿ ತಾ ಕಿನ ದೇವಗಿರಿಯ ಶ್ರೀ ಶಾಸ್ತ್ರಿಗಳು ಗದಗಿನ ಪುಟ್ಟರಾಜ ಗವಾಯಿಗಳಲ್ಲಿ ಸಂಗ ಮತ್ತು ಕೀರ್ತನ ಕಲೆಯನ್ನು ಅಭ್ಯಾಸಮಾಡಿ ಕನ್ನಡನಾಡಿನ ಅನೇಕ ಕಡೆಗಳಲ್ಲಿ ಕೀರ್ತನೆ, ಪುರಾಣ ಪ್ರವಚನ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದಾರೆ. ಸ ಧುರ ಸಂಗೀತದೊಡನೆ ನಡೆಸಿಕೊಡಲ್ಪಡುವ ಕೀರ್ತನೆಗಳು ಸಾರ್ವಜನಿಕ ಮೆಚ ಪಡೆದಿವೆ. ಅನೇಕ ಕಡೆ ಇವರಿಗೆ ಇವರ ಕಲೆ ಸನ್ಮಾನಗಳನ್ನೊದಗಿಸಿದೆ. ಅ



ಸಿದ್ಧಗ

ವಾಣಿ ಧಾರವಾಡ ಕೇಂದ್ರದಿಂದ ಇವರ ಅನೇಕ ಕೀರ್ತನೆಗಳು ಬಿತ್ತರಗೊಂಡಿವೆ. ನಾಟಕಗಳಲ್ಲಿಯೂ ಇವರು ನಟಿಸಿ ಒಳ್ಳೆಯನಟರೆಂದು ಖ್ಯಾತಿಪೆತ್ತಿದ್ದಾರೆ.

೬೪ **ಶ್ರೀ ಬಸವರಾಜ ತೆಂಗಿನಮಠ, ಹುನಗುಂದ:** ವಿಜಾಪುರ ಜಿಲ್ಲಾ ಹುನಗುಂದದ ಶ್ರೀಯುತರು ಒಳ್ಳೆಯ ಪ್ರವಚನಕಾರರೆಂದು ಉತ್ತರ ಕರ್ನಾಟಕ ಭಾಗದಲ್ಲಿ ಪ್ರಸಿದ್ಧರಾಗಿದ್ದಾರೆ. ಇವರ ಅನೇಕ ಲೇಖನಗಳು ರಾಜ್ಯದ ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿವೆ.. ಇವರ ಒಂದೆರಡು ಕೃತಿಗಳೂ ಪ್ರಕಟಗೊಂಡಿವೆ.

೬೫ **ಶ್ರೀ ಉಳವೀಶಸ್ವಾಮಿ ಮುರಗೋಡ:** ಪ್ರಾಥಮಿಕ ಶಾಲಾ ಉಪಾಧ್ಯಾಯ ವೃತ್ತಿಯಲ್ಲಿರುವ ಶ್ರೀ ಉಳುವೀಶರು ಲಾವಣಿಕಾರರಾಗಿ, ಜಾನಪದ ಸಾಹಿತ್ಯ ವಾಚಕರಾಗಿ, ಉತ್ತಮ ಪ್ರವಚನ ಪಟುಗಳಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಪ್ರಸಿದ್ಧರಾಗಿದ್ದಾರೆ. ಅನೇಕ ಮಠಾಧಿಪತಿಗಳ ಸಂಪರ್ಕ ಹೊಂದಿರುವ ಶ್ರೀಯುತರು ಪುರಾಣಪ್ರವಚನ, ಗಮಕ, ಕೀರ್ತನೆಗಳಲ್ಲಿ ನಿವೃತ್ತಿಯ ನಂತರ ಕಾಲಕಳೆಯಲು ಸಂಕಲ್ಪಿಸಿದ್ದಾರೆ. ಇವರಿಗೆ ಅನೇಕ ಸಾರ್ವಜನಿಕ ಸನ್ಮಾನ ಸಮಾರಂಭಗಳೂ ಜರುಗಿವೆಯೆಂದು ತಿಳಿದುಬರುವುದು.

೬೬ **ಪಂಡಿತ ಶ್ರೀ ಚನ್ನವೀರಶಾಸ್ತ್ರಿ ಎಡ್ರಾಮಿಮಠ, ಕಮತಗಿ:** ಹುನಗುಂದ ತಾಲ್ಲೂಕು ಕಮತಗಿಯ ಈ ವಯೋವೃದ್ಧ ಶಾಸ್ತ್ರಿಗಳು ಸಂಸ್ಕೃತ ವಿದ್ಯಾಭ್ಯಾಸವನ್ನು ಬನಾರಸದಲ್ಲಿ ಮಾಡಿ, ಪಾಂಡಿತ್ಯಗಳಿಸಿ ಉತ್ತರ ಕರ್ನಾಟಕದ ಅನೇಕ ಕಡೆಗಳಲ್ಲಿ ಪುರಾಣಪ್ರವಚನ ಕಾರ್ಯಕ್ರಮಗಳನ್ನು ನಡೆಸಿ ಕೊಟ್ಟಿದ್ದಾರೆ. ವೃದ್ಧಾಪ್ಯದ ಮೂಲಕ ಸದ್ಯಕ್ಕೆ ಇವರ ಕಾರ್ಯಕ್ರಮಗಳು ಸ್ಥಗಿತಗೊಂಡಿವೆ. ಇವರಿಗೆ ಅನೇಕ ಕಡೆಗಳಲ್ಲಿ ಸಾರ್ವಜನಿಕ ಸನ್ಮಾನ ಸಮಾರಂಭಗಳು ನಡೆದಿವೆ.

೬೭ **ಶ್ರೀ ವೀರಭದ್ರಶಾಸ್ತ್ರಿಗಳು ಹಿರೇಮಠ, ಕುರುಬಗೊಂಡ:** ಹಾವೇರಿ ತಾಲೂಕಿನ ಕುರುಬಗೊಂಡದ ಶ್ರೀ ಶಾಸ್ತ್ರಿಗಳು ಗದಗಿನ ಶ್ರೀ ಪುಟ್ಟರಾಜಗವಾಯಿಗಳಲ್ಲಿ ಸಂಗೀತ ಮತ್ತು ಕೀರ್ತನ ಕಲೆಯನ್ನು ಅಭ್ಯಾಸಮಾಡಿ ಪುರಾಣ ಪ್ರವಚನ, ಶಿವಕೀರ್ತನ ಪ್ರಸಂಗಗಳನ್ನು ಉತ್ತರ ಕರ್ನಾಟಕದ ಅನೇಕ ಕಡೆ ನಡೆಸಿಕೊಟ್ಟಿದ್ದಾರೆ. ಇವರಿಗೆ ಅನೇಕ ಕಡೆ ಸಾರ್ವಜನಿಕ ಪ್ರಶಸ್ತಿ ಪತ್ರಗಳು ಲಭಿಸಿವೆ.

ಮೇಲ್ಕಂಡ ಈ ಮಹಾಶಯರಲ್ಲದೆ ಶಿವಕೀರ್ತನೆ, ಗಮಕ, ಪುರಾಣಪ್ರವಚನಕಾರರ ಪಟ್ಟಿ ಇನ್ನೂ ದೊಡ್ಡದಾಗುವ ಸಂಭವವಿದೆ. ಸರಿಯಾದ ಮಾಹಿತಿ ಲಭ್ಯವಾಗದಿರುವುದರಿಂದಲೂ ಮುಖ್ಯವಾಗಿ ಸ್ಥಳಾಭಾವದಿಂದಲೂ ಕೆಲವರ ಹೆಸರನ್ನು ಮಾತ್ರ ಈ ಕೆಳಗೆ ಸೂಚಿಸಿದ್ದೇವೆ. ಬಳ್ಳಾರಿ ಕರಡೆಪ್ಪನವರು ಸ್ಥಾಪಿಸಿದ ಸಂಸ್ಕೃತ ಪಾಠಶಾಲೆಯಲ್ಲಿ ತರಬೇತಿಗೊಂಡ ಅನೇಕ ಶಾಸ್ತ್ರಿಗಳು ೧೯ನೆಯ ಶತಮಾ

ನದ ಉತ್ತರಾರ್ಧದಲ್ಲಿ ವೀರಶೈವ ಧರ್ಮತತ್ತ್ವ ಪ್ರಸಾರದ ಪ್ರವಚನಕಾರರಾಗಿ ಕೀರ್ತನಕಾರರಾಗಿ ಬಹಳ ಸೇವೆ ಸಲ್ಲಿಸಿದ್ದಾರೆ. ಅವರಲ್ಲಿ ಮುಖ್ಯವಾಗಿ ಮುದುಗಲ್ಲು ಹಿರೇಮಠದ ಲಿಂ. ಅಮರಪ್ಪಶಾಸ್ತ್ರಿ, ನಾರಾಯಣದೇವರ ಕೆರೆ ಶಿವರಾತ್ರಿ ಮಠದ ಲಿಂ. ಸದಾಶಿವಶಾಸ್ತ್ರಿ, ಕೊ ಳ ಗ ಲ್ಲು ಹಿರೇಮಠದ ಗುರುಶಾಂತಶಾಸ್ತ್ರಿ, ಮಸೂತಿಜಗಲಿ ಹಿರೇಮಠದ ಲಿಂ. ನೀಲಕಂಠಶಾಸ್ತ್ರಿ, ನರೇಗಲ್ಲುಮಠದ ಲಿಂ. ಶಿವಬಸವಶಾಸ್ತ್ರಿ, ಕೋಡಿಕೊಪ್ಪ ಹಿರೇಮಠದ ಲಿಂ. ಗುರುಲಿಂಗಶಾಸ್ತ್ರಿ, ಪ ಗ ಡ ದಿನ್ನಿ ಹಿರೇಮಠದ ಲಿಂ. ಪಂಚಾಕ್ಷರಿಶಾಸ್ತ್ರಿ, ಕೊಟ್ಟೂರು ಹಿರೇಮಠದ ಲಿಂ. ರೇ ವ ಣ ಶಾಸ್ತ್ರಿ, ಹರಪನಹಳ್ಳಿ ಹಿರೇಮಠದ ಲಿಂ ಬಸವಲಿಂಗಶಾಸ್ತ್ರಿ, ಉಂತಕಲ್ಲು ಶಿಖಾಮಣಿ ಮಠದ ಲಿಂ. ವಿರೂಪಾಕ್ಷಶಾಸ್ತ್ರಿ, ದ್ಯಾಂಪುರದ ಹಿ ರೇ ಮ ಠ ದ ಲಿಂ. ವೀರೇಶ್ವರ ಶಾಸ್ತ್ರಿ, ಶಿರಾಳಕೊಪ್ಪದ ಎಮ್ಮಿಗನೂರು ಗದಿಗಯ್ಯನವರು ಮುಂತಾದವರು ಈ ಪಟ್ಟಿಯಲ್ಲಿ ಸೇರುವರು. ಇವರಲ್ಲದೆ ಪಂಡಿತ ಜಿ. ಎಂ ಚಂದ್ರಶೇಖರ ಶಾಸ್ತ್ರಿ ಇಜಾರಿ ಲಕಮಾಪುರ, ದಾನಪ್ಪ ಜತ್ತಿ ತೀಕೋಟಾ, ಬಿ. ಶಾಂತವೀರಯ್ಯ ಅಗರ ಬನ್ನಿಹಟ್ಟಿ, ಲಿಂ. ಟಿ. ಎನ್ ಚನ್ನಪ್ಪನವರು, ಬೆಂಗಳೂರು. ದಯಾನಂದ ಸ್ವಾಮಿಗಳು ಯರನಾಳು, ಅಕ್ಕೂರುಮಠದ ಷಣ್ಮುಖಯ್ಯ ಬೆಂಗಳೂರು, ಶಂಕರೇಗೌಡರು ಪಡಗಾನೂರು, ಲಕಮಾಪುರದ ಜಯದೇವಶಾಸ್ತ್ರಿಗಳು ಹಾವೇರಿ ? ಹುಬ್ಬಳ್ಳಿ ವಿರೂಪಾಕ್ಷ ಶಾಸ್ತ್ರಿ, ಹಾನಗಲ್ಲಿನ ಕುಮ್ಮೂರು ಕೊಟ್ರಯ್ಯ, ಅಕ್ಕಿ ಆಲೂರಿನ ಕಲ್ಯಾಣಯ್ಯ, ತೆವರಮೆಳ್ಳಿಹಳ್ಳಿ ಲಿಂ. ಮಹಾಂತಯ್ಯ, ನಾಯಕಲ್ ಬಸವರಾಜಶಾಸ್ತ್ರಿ, ತುಮಕೂರಿನ ಗಮಕ ವಿದ್ವಾನ್ ಸಿದ್ಧಗಂಗಯ್ಯ ಇತ್ಯಾದಿ. ಹೀಗೆ ಸಮಾಜದಲ್ಲಿ ಶಿವಾನುಭವ ಪ್ರವಚನಕಾರರು, ಪುರಾಣಕೀರ್ತನಕಾರರು, ಗಮಕಿಗಳು ಇ ವ ರ ಸೇವೆ ಧರ್ಮತತ್ತ್ವ ಜಾಗೃತಿಗೆ ತನ್ನ ಕೈಲಾದ ಸೇವೆ ಮಾಡಿದೆ.

---



---

# ದುಶ್ಚಟ

—ಹೆಚ್. ಎಸ್. ಸಿದ್ಧಗಂಗಪ್ಪ, ಎಂ.ಎ.,

ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ಚಟಕ್ಕೆ ಅಂಟಿಕೊಂಡೇ ಇರುತ್ತಾನೆ. ಚಟ ಒಳ್ಳೆಯದಾಗಿರಬಹುದು, ಇಲ್ಲವೆ ಕೆಟ್ಟದ್ದಾಗಿರಬಹುದು. ಕೆಟ್ಟ ಚಟವನ್ನು ದುರಭ್ಯಾಸ ಎಂದು ಕರೆಯುವುದು ಉಂಟು. ಒಳ್ಳೆಯ ಚಟ ವ್ಯಕ್ತಿಯ ಭವ್ಯ ಭವಿಷ್ಯಕ್ಕೆ ಬುನಾದಿಯಾದರೆ, ಕೆಟ್ಟ ಚಟ ಅವನ ವಿನಾಶಕ್ಕೆ ನಾಂದಿಯಾಗುತ್ತದೆ. "ಚಟ ಚಟ್ಟಕ್ಕೆ ಹೋಗುವವರಿಗೂ ಬಿಡುವುದಿಲ್ಲ" ಎಂಬ ಗಾದೆ ಚಟಗಳ ಮಹತ್ವವನ್ನು ತಿಳಿಸುತ್ತದೆ. ಒಮ್ಮೆ ಚಟಕ್ಕೆ ಅಂಟಿಕೊಂಡರೆ ಬಿಡಿಸಿಕೊಳ್ಳುವುದು ಕಷ್ಟ. ಒಂದು ರೀತಿಯಲ್ಲಿ ಜೇಡನ ಬಲೆಗೆ ಸಿಕ್ಕಿಹಾಕಿಕೊಂಡ ಕೀಟದಂತೆ.

ಒಳ್ಳೆಯ ಚಟ ಆರಂಭದಲ್ಲಿ ಕಷ್ಟ. ಅಂತ್ಯದಲ್ಲಿ ಸುಖ, ಸಂತೋಷ, ನೆಮ್ಮದಿಯನ್ನು ತಂದುಕೊಡುತ್ತದೆ. ದುಶ್ಚಟ ಪ್ರಾರಂಭದಲ್ಲಿ ತಾತ್ಕಾಲಿಕ ಸುಖ, ಸಂತೋಷ. ಮನೋಲ್ಲಾಸವನ್ನು ತಂದುಕೊಟ್ಟು ಕೊನೆಗೆ ಮಾರಕವಾಗಿ ಪರಿಣಮಿಸುತ್ತದೆ. ವ್ಯಕ್ತಿ ದುಶ್ಚಟಗಳಿಗೆ ಬೇಗ ಹೊಂದಿಕೊಳ್ಳುವಂತೆ ಒಳ್ಳೆಯ ಚಟಗಳಿಗೆ ಹೊಂದಿಕೊಳ್ಳುವುದಿಲ್ಲ. ಅದಕ್ಕೆ ಶ್ರದ್ಧೆ ಸತತ ಪ್ರಯತ್ನ ದೃಢ ಮನಸ್ಸು ಅತ್ಯವಶ್ಯಕ. ಪರಿಸರ ಸಹವಾಸ ಇವುಗಳಿಗೆ ತಕ್ಕಂತೆ ವ್ಯಕ್ತಿಯ ಮಾನಸಿಕ, ಬೌದ್ಧಿಕ ಬೆಳವಣಿಗೆಯಾಗುತ್ತದೆ. ಗಿಳಿ ಕಥೆಯೊಂದರಲ್ಲಿ ಬರುವ ಒಂದು ದೃಷ್ಟಾಂತ ಇದಕ್ಕೆ ನಿದರ್ಶನ. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಎರಡು ಗಿಳಿ ಮರಿಗಳು ಬೇರೆಬೇರೆ ವಾತಾವರಣದಲ್ಲಿ ಬೆಳೆದಾಗ ಅವುಗಳು ನಡೆದುಕೊಂಡ ರೀತಿಯನ್ನು ಕೇಳಿದ್ದೇವೆ. ಅದಕ್ಕೆ ಬಲ್ಲವರು ಮಕ್ಕಳನ್ನು ಒಳ್ಳೆಯ ವಾತಾವರಣದಲ್ಲಿ ಬೆಳೆಸಬೇಕು ಎನ್ನುವುದು.

ವ್ಯಕ್ತಿ ದುಶ್ಚಟಗಳಿಗೆ ಬಲಿಯಾಗುವುದು ತನ್ನ ಗೋರಿಯನ್ನು ತಾನೇ ತೋಡಿಕೊಂಡಂತೆ. ಒಮ್ಮೆ ಬಿಂದುವಾಗಿ ಪ್ರಾರಂಭವಾದ ದುಶ್ಚಟಗಳು ದಿನೇ ದಿನೇ ಬೃಹದಾಕಾರವಾಗಿ ಬೆಳೆಯುತ್ತ ಕೊನೆಗೆ ವ್ಯಕ್ತಿಯನ್ನು ತನ್ನಲ್ಲಿ ಅಡಗಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ದುಶ್ಚಟಗಳಿಗೆ ಒಳಗಾದಾಗ ವ್ಯಕ್ತಿ ಮಾನಸಿಕ ದೌರ್ಬಲ್ಯಕ್ಕೆ ತುತ್ತಾಗುತ್ತಾನೆ. ಇದರಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದಷ್ಟು ಸಿಕ್ಕಿಹಾಕಿಕೊಳ್ಳುತ್ತಾ ಹೋಗುತ್ತಾನೆ.

ಅನಿರೀಕ್ಷಿತವಾಗಿ ಕೆಟ್ಟ ಚಟಗಳು ಪ್ರಾರಂಭವಾಗುತ್ತವೆ. ಸ್ನೇಹಿತರ ಒತ್ತಾಯಕ್ಕೆ ಕಟ್ಟುಬಿದ್ದು ಒಂದೆರಡು ಬಾರಿ ಧೂಮಪಾನ ಮಾಡುವುದು, ಜೂಜಾಡುವುದು.

ಮಧ್ಯ ಸೇವನೆ ಮಾಡುವುದು ಹೀಗೆ ಬರುಬರುತ್ತಾ ಅದನ್ನೇ ಅಭ್ಯಾಸ ಮಾಡಿಕೊಳ್ಳು ತ್ತಾನೆ ಮತ್ತೆ ಕೆಲವರು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ತಮ್ಮ ಸ್ಥಾನ-ಮಾನಗಳನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಇಂತಹ ಚಟಗಳಿಗೆ ಕಟ್ಟುಬೀಳುತ್ತಾರೆ. ಮತ್ತೆ ಹಲವರು ತಮಗಿರುವ ನೋವನ್ನು ಮರೆಯಲು ದುಶ್ಚಟಗಳಿಗೆ ಶರಣಾಗುತ್ತಾರೆ. ದಿನ ಗಳೆದಂತೆ ಅದಕ್ಕೆ ಪರೋಕ್ಷವಾಗಿ ದಾಸರಾಗುತ್ತಾ ಹೋಗುತ್ತಾರೆ.

ಇತಿಹಾಸ ಪುರಾಣಗಳ ಕಡೆ ಕಣ್ಣಾಯಿಸಿದರೆ ಜೂಜಾಡಿ ಅನೇಕ ತೊಂದರೆ ಗಳಿಗೆ ಸಿಕ್ಕಿಕೊಂಡು ತಾನು ಮಾಡಿದ ತಪ್ಪಿಗೆ ಇಡೀ ಕುಟುಂಬವೇ ನರಳುವಂತೆ ಮಾಡಿದ ಉದಾಹರಣೆಗಳು ನಮಗೆ ಹೇರಳವಾಗಿ ದೊರೆಯುತ್ತವೆ. ನಳ ಜೂಜಾಡಿ ಪಡಬಾರದ ತೊಂದರೆಗೆ ಒಳಗಾದ. ಧರ್ಮರಾಯ ತಾನು ಮಾಡಿದ ತಪ್ಪಿಗೆ ರಾಜ್ಯ ಕೋಶವನ್ನು ಕಳೆದುಕೊಂಡು ತನ್ನ ಒಡ ಹುಟ್ಟಿದವರು, ತಾಯಿ, ಕೈಹಿಡಿದ ಹೆಂಡತಿ ಎಲ್ಲರೂ ಹದಿಮೂರು ವರ್ಷಗಳ ಕಾಲ ತೊಂದರೆ ಪಡಬೇಕಾಯಿತು. ಜನಪದ ತ್ರಿಪದಿಯೊಂದರಲ್ಲಿ ಜೂಜಿನ ದುಷ್ಪರಿಣಾಮವನ್ನು ತಿಳಿಸಿ ತಾಯಿಯೊಬ್ಬಳು ತನ್ನ ಮಗನಿಗೆ ಜೂಜಾಡಬೇಡ ಎಂದು ಎಚ್ಚರಿಕೆ ನೀಡಿದ್ದಾಳೆ.

ಜೂಜಾಡಿ ಪಾಂಡವರು ರಾಜ್ಯಾವ ಸೋತರು
ಜೂಜಾಡಿ ನಳನು ಬಳಲಿದ ಕಂದಯ್ಯ
ಜೂಜೀಗೆ ಮನವ ಬಿಡದಿರು.

ಜೂಜಿನಷ್ಟೇ ದೈಹಿಕವಾಗಿ, ಮಾನಸಿಕವಾಗಿ, ಆರ್ಥಿಕವಾಗಿ, ಸಾಮಾಜಿಕ ವಾಗಿ ದುಷ್ಪರಿಣಾಮವನ್ನು ಬೀರುವುದು ಕುಡಿತ. ಕುಡುಕರ ಸಹವಾಸದಿಂದ ಮಾನ ಹಾನಿ, ಧನಹಾನಿ ಅದಕ್ಕೆ,

ಮದಿಸಿದ್ದ ಆನೇಯ ಮಲಗಿದ್ದ ಹಾವನ್ನು
ಮದಿರೆಯ ಕುಡಿದು ಬರುವವನ–ಕಂಡರೆ
ಹರದಾರಿ ಬಿಟ್ಟು ಹರದೋಡು.

ಎಂದು ಬುದ್ಧಿವಾದ ಹೇಳಿದ್ದಾರೆ.

ದುಶ್ಚಟಗಳಲ್ಲಿ ವೇಶ್ಯಯರ ಸಹವಾಸವೂ ಒಂದು. ಒಮ್ಮೆ ವೇಶ್ಯೆಯರ ಸಹ ವಾಸ ಮಾಡಿದರೆ ಅದರಿಂದ ಬಿಡಿಸಿಕೊಳ್ಳುವುದು ಕಷ್ಟ ಎಂದಿದ್ದಾರೆ. ಅದಕ್ಕೆ ನಮ್ಮ ಜನಪದರು,

ಸೂಳಿಗೆ ಹೋಗುವವನ ಸುಲಿದು ಮಟ್ಟೇಕಟ್ಟಿ
ಊರ ಹೊರಗವನ ಹೆಡಮುರುಗಿ–ಕಟ್ಟಿದರ
ಸೂಳೆಂಬ ಶಬುದ ಬಿಡಲಿಲ್ಲ.

ಎಂದು ಹೇಳಿದವರು ಸೂಳೆಯ ಸಹವಾಸ ಮಾಡಿದವರಿಗೆ ಎಂಥಹ ದುಸ್ಥಿತಿ
ಬರುತ್ತದೆ ಎಂಬುದನ್ನು ನಿರೂಪಿಸಿದ್ದಾರೆ.

ಸೂಳೇಗೆ ಹೋದವನು ಏನಾದ ಎಂತಾದ
ಕಾಡು ನಾಯಾದ ಕಪಿಯಾದ–ಆ ಮುಸುವ
ಸೂಳೇಯ ಕಾಲಿಗೆ ಕೆರವಾದ.

ಇವಲ್ಲದೆ ಅತಿಯಾಗಿ ತಿನ್ನುವುದು, ಅನಾವಶ್ಯಕವಾಗಿ ಮೇಲಿಂದ ಮೇಲೆ ಔಷಧಿಯನ್ನು ಸೇವಿಸುವುದು ಚಾಡಿ ಹೇಳುವುದು ಇತ್ಯಾದಿ ಕೆಟ್ಟ ಚಟಗಳು ವಿನಾಶದತ್ತ ಕೊಂಡೊಯ್ಯುತ್ತವೆ. ಇದರಿಂದ ಜೀವನದಲ್ಲಿ ಅಶಾಂತಿ ಬಿರುಗಾಳಿ ಬೀಸುತ್ತದೆ. ಸಂಸಾರದಲ್ಲಿ ಸಾಮರಸ್ಯವಿಲ್ಲದೆ ಕಾರ್ಮೋಡ ಕವಿಯುತ್ತದೆ. ಯಾವುದೇ ದುಶ್ಚಟಗಳನ್ನು ಮೊಳಕೆಯಲ್ಲಿ ಇರುವಾಗಲೇ ಕಿತ್ತು ಹಾಕಬೇಕು. ಏಕೆಂದರೆ ಒಮ್ಮೆ ಚಟಕ್ಕೆ ಬೆನ್ನು ಹತ್ತಿದರೆ ಅವು ನಮ್ಮನ್ನೇ ಬೆನ್ನು ಹತ್ತುತ್ತಾ ಬರುತ್ತವೆ.

---

# ದಕ್ಷಿಣ ಧ್ರುವ ಕೇಂದ್ರ ಎಲ್ಲಿದೆ ?

ದಕ್ಷಿಣ ಧ್ರುವದ ನಿಖರ ಸ್ಥಳವನ್ನು ನಿರ್ಧರಿಸುವ ಸಲುವಾಗಿ ಸೋವಿಯತ್ ಒಕ್ಕೂಟದ ಹೊಸ ಅಂಟಾರ್ಕ್ಟಿಕ್ ಶೋಧ ತಂಡವನ್ನು ಅಡ್ಮಿರಲ್ ವ್ಲದಿಮಿರಸ್ಕಿ ಮತ್ತು ಫದೈಬೆಲ್ಲಿನ್ಸ್‌ಗೌಝುನ್ ಸಂಶೋಧನ ನೌಕೆಗಳಲ್ಲಿ ಭೂ ಮಿ ಯ ಸುತ್ತ ಸಂಚಾರಕ್ಕೆ ಕಳುಹಿಸಲಾಗಿದೆ.

ಧ್ರುವವು ಪ್ರತಿವರ್ಷ ಹಲವು ಕಿಲೋಮೀಟರುಗಳ ವೇಗದಲ್ಲಿ ಸರಿದುಕೊಳ್ಳುತ್ತಿದೆಯೆಂದು ಭಾ ವಿ ಸ ಲಾ ಗಿ ದ್ದು ಅ ದೀ ಗ ಸಮುದ್ರದಲ್ಲಿದೆಯೆಂದು ಪರಿಗಣಿಸಲಾಗಿದೆ.

ಸೋವಿಯತ್ ಅನ್ವೇಷಣ ತಂಡವು ಆಳದಲ್ಲಿ ಭಾರಿ ಅಂತರವಿರುವ ಸಾಗರ ಪ್ರದೇಶಗಳಲ್ಲಿ ಶೋಧನೆ ನಡೆಸುವುದಲ್ಲದೆ ಸಾಗರ ತಳ, ಹಿಮವಲಯುಗಳು ಹಾಗೂ ನೀರ್ಗಲ್ಲ ಗುಡ್ಡೆಗಳ ಅಧ್ಯಯನವನ್ನು ನಡೆಸುವುದು. ಅಂಟಾರ್ಕ್ಟಿಕ್ ಪ್ರದೇಶದಲ್ಲಿನ ನೌಕಾಯಾನದ ನಕಾಶೆಗಳನ್ನು ಅದು ಸರಿಪಡಿಸುವುದಲ್ಲದೆ ಸಾವಿರಾರು, ಮೀನುಗಾರರು ಮತ್ತು ಧ್ರುವ ಪ್ರದೇಶದ ಅನ್ವೇಷಕರಿಗೆ ಸಹಾಯಮಾಡುವುದು.

ಸೋವಿಯತ್ ಧ್ರುವ ಸಂಶೋಧಕರು ಹಲವು ವರ್ಷಗಳಿಂದ ಅತ್ಯಾಧುನಿಕ ಸಾಧನ ಸಲಕರಣೆಗಳಿಂದ ಸಜ್ಜುಗೊಂಡಿರುವ ಸಂಶೋಧನ ಕೇಂದ್ರಗಳು ಹಾಗೂ ಸಂಶೋಧನ ನೌಕೆಗಳಲ್ಲಿ ಇತರ ಅನೇಕ ರಾಷ್ಟ್ರಗಳು ಸಹ ಸಂಶೋಧಕರೊಂದಿಗೆ ಸಂಶೋಧನ ಕಾರ್ಯ ನಡೆಸುತ್ತಿದ್ದಾರೆ.

ಈ ಪ್ರಯತ್ನದ ಫಲವಾಗಿ 1820 ರಲ್ಲಿ ರಷ್ಯಾದ ವೋಸ್ತೊಕ ಮತ್ತು ಮಿರ್ನಿ ಶೋಧನ ನೌಕೆಗಳು ಅಂಟಾರ್ಕ್ಟಿಕ್ ಖಂಡವನ್ನು ಪತ್ತೆಹಚ್ಚುವುದು ಸಾಧ್ಯವಾಯಿತು.

# ಸಿದ್ಧಗಂಗೆಯ ಕಾರುಣ್ಯ ಶ್ರೀ ಸಂಪದ

—ಶ್ರೀ ಕೋರಂ
ಸಂಸ್ಕೃತ ಕಾಲೇಜ್ ಶ್ರೀ ಸಿದ್ಧಗಂ

ಸನ್ಯಾಸ ಧರ್ಮ ಕಾರ್ಯ ರೂಪಕ್ಕಿಳಿದಾಗ ಎಂತಹ ಅದ್ಭುತ ಸಾಧನಾ ಶ್ರೀ ಸಾಧ್ಯವೆಂಬುದಕ್ಕೆ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬದುಕೇ ನಿತಾಂ ನಿದರ್ಶನ. ಶ್ರೀ ಶ್ರೀಗಳವರ ಸಾಧನಾ ಸಂಪತ್ತು ಅಲೋಕ ಸಾಮಾನ್ಯ. ಅ ಘನವ್ಯಕ್ತಿತ್ವವೂ ಬಹುಮುಖ. ಅವುಗಳಲ್ಲಿ ಕೆಲವು ಶ್ರೀಮುಖಗಳನ್ನು ಮಾತ್ರ ಇ ಸಂಕ್ಷಿಪ್ತವಾಗಿ ಉಲ್ಲೇಖಿಸಲಾಗಿದೆ.

ದಾಸೋಹ ಶ್ರೀ :

ಶ್ರೀ ಸಿದ್ಧಗಂಗಾ ಕ್ಷೇತ್ರ ದಾಸೋಹ ಮಠ ಎಂದೇ ಪ್ರಸಿದ್ಧಿ. ಇದು ಗು ಪರಂಪರೆಯ ಬಳಿವಿಡಿದು ಬಂ ದಂ ಥ ದು. ಶ್ರೀ ಶ್ರೀಗಳವರ ಕಾಲದಲ್ಲಂತ ಜಗಜ್ಜಾಹಿರಾತಾಗಿದೆ. ದಿನಂಪ್ರತಿ ಈ ಮಠದಲ್ಲಿ ಅಟ್ಟುಸಾಕವಾಗವ ಜೆಂಮು ಬ ಯಾಗುವ ಲೆಕ್ಕಕ್ಕೆ ಸಿಕ್ಕದ ಆದರೆ ಜೋದ್ಯಂತರುವ ದವಸಧಾನ್ಯ ಮತ್ತು ಸ ರಾಶಿಯೇ ಇದಕ್ಕೆ ಸಾಕ್ಷಿ. ಇನ್ನು ವಿಶೇಷ ದಿನಗಳಲ್ಲಿ ಹಾಗೂ ಜಾತ್ರೆ ಸಮಯ ನಡೆಯುವ ದಾಸೋಹವಂತೂ ಅದ್ಭುತಸ್ಯ ಅದ್ಭುತ. 'ಬರಗಾಲ ಬರಲಿ, ಕಷ್ಟಸಮ ಇರಲಿ ಯಾರು ಬಂದು ಹೇಳಿದರೂ ದಾಸೋಹ ಮಾತ್ರ ಕಡಿಮೆ ಮಾಡಲು ಸಾಧ ವಿಲ್ಲ ಎಂಬ ಶ್ರೀ ಶ್ರೀಗಳವರ ಶ್ರೀ ನಿಲವು. ಅವರ ದಾಸೋಹ ಪ್ರಿಯತೆಗೆ ಹಿಡಿದ ಗನ್ನಡಿ. ಮಠಕ್ಕೆ ಬಂದ ಪ್ರತಿಯೊಬ್ಬರನ್ನೂ ತಾರತಮ್ಯ ಬಿಟ್ಟು ಊಟ ಮಾ ಅಥವಾ ಊಟ ಆಯಿತೆ .... ? ಎಂಬುದೇ ಅವರ ಮೊದಲ ನುಡಿ. ಒಟ್ಟಿ ಎಲ್ಲದಕ್ಕಿಂತ ದಾಸೋಹವೇ ಅವರ ಪ್ರಾಣ. ಇಂಥ ದಾಸೋಹಮೂರ್ತಿ ನಮ್ಮೆದು ವಿರಾಜಿಸುತ್ತಿರುವುದು ನಮ್ಮ ಪುಣ್ಯ.

ಕಾಯಕಶ್ರೀ: "ಪ್ರತಿಯೊಬ್ಬರೂ ದೇಹವನ್ನು ದಂಡಿಸಿ ದುಡಿದು ತಿನ್ನಬೇ ಹೊರತು ಕುಳಿತುತಿನ್ನುವ ಹಕ್ಕು ಯಾರಿಗೂ ಇಲ್ಲ" ಎಂಬುದೇ ಶ್ರೀ ಶ್ರೀ ಗಳ ಬದುಕಿನ ಸಿದ್ಧಾಂತ. ಅದು ಅವರ ನುಡಿಮಾತ್ರವಲ್ಲ ನಡೆಯೂ ಹೌದು. ಮಠದ ಪ್ರತಿಯೊಂದು ಕೆಲಸಕಾರ್ಯಗಳಲ್ಲಿಯೂ ವಿದ್ಯಾರ್ಥಿಗಳೊಡನೆ ಶ್ರೀ ಶ್ರೀ ಳವರೂ ಪಾಲ್ಗೊಳ್ಳುತ್ತಾರೆ. ಪ್ರತಿ ವಿದ್ಯಾರ್ಥಿಯ ತಲೆಯ ಮೇಲೂ ತಾವೇ ಯಿಂದ ಕಲ್ಲಿತ್ತಿ ಹೊರಿಸುತ್ತಾರೆ. ಶ್ರೀ ಮಠದ ಎಲ್ಲ ಕಟ್ಟಡಗಳ ಪ್ರತಿಕಲ್ಲೂ

ಶ್ರೀಗಳವರ ಅಮೃತ ಹಸ್ತಸ್ಪರ್ಶದಿಂದ ಭವ್ಯ[ಮಂಗಳ] ಹೊಂದಿವೆ. ಶಾಲೆಗೆ ಹೋಗು ವವಿದ್ಯಾರ್ಥಿಗಳಿಗೆ' ಹಸಿದು ಬಂದ ಭಕ್ತರಿಗೆ, ಪ್ರಸಾದ ಸಮಯ ಸ್ವಲ್ಪ ಮೀರಿದರೆ ಸಾಕು ಕೂಡಲೆ ಸ್ವಯಂ ಶ್ರೀ ಶ್ರೀ ಗಳವರು ಪಾಕಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಾರೆ. ಹೀಗೆ ಅವರ ಅಮೃತ ಹಸ್ತದಿಂದ ಪಾಕಗೊಂಡ ಪ್ರಸಾದವನ್ನು ಸ್ವೀಕರಿಸಿ ಅದೆಷ್ಟೆ ಮಂದಿ ಭಕ್ತರು, ವಿದ್ಯಾರ್ಥಿಗಳು ಧನ್ಯರಾಗಿದ್ದಾರೆ. ಇದರಂತೆ ಕಪಿಲೆಯಿಂದ ನೀರೆ ಳೆದಿದ್ದಾರೆ. ಸೌದೆಗಾಗಿ ಕಾಲ್ನಡಿಗೆಯಲ್ಲಿ ಹತ್ತಾರು ಮೈಲಿ ಸುತ್ತಿದ್ದಾರೆ. ಹೊಲ ಗದ್ದೆಗಳಲ್ಲಿ ಕೃಷಿಕಾರ್ಯಗಳಲ್ಲಿ ದುಡಿದಿದ್ದಾರೆ, ದುಡಿಯುತ್ತಿದ್ದಾರೆ. ಒಟ್ಟಿನಲ್ಲಿ ಶ್ರೀ ಶ್ರೀ ಗಳವರು ಮಾಡದ, ಅವರಿಗೆ ಬರದ ಕಾಯಕವಿಲ್ಲವೆಂದೇ ಹೇಳಬಹುದು. ಅವರ ಕಾಯಕ ಲೋಕಾದರ್ಶವಾದುದು.

ಪರುಷ ಶ್ರೀ: ತಮ್ಮ ಗುರುಗಳಂತೆ ತಾಪತ್ರಯತ್ರಸ್ತರಿಗೆ ಚಿಕಿತ್ಸೆಗೈವುದೂ ಶ್ರೀ ಶ್ರೀಗಳವರ ಮುಖ್ಯವಾದ ದೈನಂದಿನ ಕಾರ್ಯಕ್ರಮಗಳಲ್ಲಿ ಒಂದು. ಆಧ್ಯಾತ್ಮಿಕ, ಅಧಿದೈವಿಕ ಮತ್ತು ಆದಿಭೌತಿಕ ತಾಪಗಳಿಂದ ಬಳಲಿದ ಸಾವಿರಾರು ಜನ ನೂರಾರು ಮೈಲಿಗಳಿಂದ ಶ್ರೀ ಮಠಕ್ಕೆ ಬರುತ್ತಾರೆ. ಬಂದ ಆರ್ತರನ್ನು ಇವ ಗಾವಿಲ ಇವ ಪಟ್ಟಣಿಗನೆನ್ನದೆ, ಬಡವ ಬಲ್ಲಿದ ಎನ್ನದೇ, ಜಾತಿ ಮತಗೋತ್ರಗಳ ಎಣಿಸದೆ ಎಲ್ಲರಿಗೂ ಯಂತ್ರಧಾರಣಾದಿ ಚಿಕಿತ್ಸೆ ಮಾಡುತ್ತಾರೆ; ನುಡಿಸುತ್ತಾರೆ. ಆಶೀರ್ವದಿಸುತ್ತಾರೆ. ಹೀಗೆ ಅದೆಷ್ಟೋ ಮಂದಿ ಶ್ರೀ ಶ್ರೀಗಳವರ ವಾಣಿಯಿಂದ. ಸಂಭಾಷಣೆಯಿಂದ' ಸ್ಪರ್ಶದಿಂದ, ದೈಹಿಕ ಮಾನಸಿಕಾದಿ ರೋಗಾದಿಗಳನ್ನು ಕಳೆದು ಕೊಂಡು ಶ್ರೀ ಮಠದಲ್ಲಿ ಪ್ರಸಾದ ಸ್ವೀಕರಿಸಿ ಹೊಸಮನುಷ್ಯರಾಗಿ ಹೋಗುತ್ತಾರೆ. ಮುಂದವರು ವಂಶ ಪಾರಂಪರಂಪರ್ಯವಾಗಿ ಭಯಭಕ್ತಿಯಿಂದ ಮಠಕ್ಕೆ ನಡೆದು ಕೊಳ್ಳುತ್ತಾರೆ. ಹೀಗೆ ಇಂಥ ಪರುಷಮಣಿ ಇರುವುದು ಆರ್ತರಿಗೊಂದು ನಿಧಿಯಿದ್ದಂತೆ.

ದಯಾಶ್ರೀ: ಶ್ರೀ ಶ್ರೀ ಗಳವರ ಭೂತಾನುಕಂಪ ಅನುಪಮವಾದುದು. ರುಕ್ಷೇತ್ರದ ಕೆಲಸಕಾರ್ಯಗಳ ಪರಿವೀಕ್ಷಣೆಗಾಗಿ ಹೊರಟರೆ ಸಾಕು ಅವರನ್ನು ಕಂಡ ಕೂಡಲೆ ಮಠದ ದನಕರುಗಳು ಚಂಗನೆ "ಕರು ತಾಯ ಬಳಿಗೆ ಜಿಗಿಯುವಂತೆ" ಓಡಿ ಬರುತ್ತವೆ. ಮೂಕ ಭಾಷೆಯಿಂದ ತಮ್ಮ ಅನಿಸಿಕೆಯನ್ನು ಶ್ರೀ ಶ್ರೀ ಗಳವರೊಡನೆ ಅರುಹುತ್ತವೆ. ಆಗ ಶ್ರೀ ಶ್ರೀ ಗಳವರು ಅವುಗಳ ಮೈತುರುಚಿ ಅನುಕಂಪವನ್ನು ವ್ಯಕ್ತಪಡಿಸುತ್ತಾರೆ. ಈಗಲೂ ಹೋರಿಕರುವೊಂದು ಪ್ರತಿದಿವಸ ಶ್ರೀ ಶ್ರೀಗಳವರು ಆಫೀಸಿನಲ್ಲಿದ್ದಾಗ ನುಗ್ಗಿ ಬಾಳೆಹಣ್ಣನ್ನು ಗಿಟ್ಟಿಸಿಕೊಂಡು ಬರುತ್ತದೆ. ಯಾವ ಜನ್ಮಾಂತರ ಸಂಸ್ಕಾರವೋ ಏನೋ ಹಸುವೊಂದು ಪ್ರತಿದಿನ ಸಂಜೆ ಪ್ರಾರ್ಥನೆ ಮುಗಿಯುವ ತನಕ ಗಂಭೀರವಾಗಿ ನಿಂತು ಹೋಗುತ್ತದೆ. ಅಶ್ರುಮಪಾತಿಯಂತೆ

# ಶ್ರೀ ಕ್ಷೇತ್ರದಲ್ಲಿ
# ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶ

—ಸಂಪಾದಕ

ಜ್ಞಾನ ದಾಸೋಹ, ಅನ್ನದಾಸೋಹಗಳ ಅಸೀಮ ಸೇವಾಮನೋಭಾ
ದಿಂದ 'ಸಕಲಜೀವಾತ್ಮರಿಗೆ ಲೇಸನೇ ಬಯಸುವ" ಕಾಯಕ ಸದ್ಭಾವದಲ್ಲಿ ಸಿ
ವಾಗಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದ 'ಮಹಾನಡೆವಳಿ"ಯೊಂದು ಭಾರತದ ಅದ್ಭುತ
ನಿಸಿದೆ. ರಚನಾತ್ಮಕವಾದ ಅನೇಕ ಕಾರ್ಯಗಳ ಮಹೋನ್ನತ ಆದರ್ಶದ ಫ
ವಾಗಿ, ಭಾರತದಲ್ಲಷ್ಟೇ ಅಲ್ಲ, ಹೊರದೇಶಗಳಲ್ಲೂ ಪ್ರಸಿದ್ಧಿಯನ್ನು ಪಡೆದಿದೆ. ಶ್ರೀ
ಕ್ಷೇತ್ರದ ಇಂದಿನ ಕ್ಷೇತ್ರಾಧಿಪತಿಗಳಾದ ಶ್ರೀಮನ್ನಿರಂಜನ, ನಿರಾಭಾರಿ, ಪ್ರಣ
ಸ್ವರೂಪಿ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವ ನಿಷ್ಠಾಪಟ್ಯ ನಡೆಸು
ಅವಿರತ ರಾಷ್ಟ್ರೀಯ ಸೇವಾಮನೋಭಾವ, ಎಲ್ಲಕ್ಕೂ ಹೆಚ್ಚಾಗಿ ಲಿಂಗತಪಸ್ಸಿ
ಪುಣ್ಯಫಲದ ಕಾರಣವಾಗಿ ಶ್ರೀ ಕ್ಷೇತ್ರಕ್ಕೆ ಈ ಘನತೆ ಗೌರವಗಳು ಪ್ರಾಪ್ತವಾಗಿ

ರಾಷ್ಟ್ರೀಯ ಅಭಿವೃದ್ಧಿಯ, ಮತ್ತು ಧಾರ್ಮಿಕ ಪ್ರಜ್ಞೆಯ ಮನೋಭಾ
ವನ್ನು ಜನತೆಯಲ್ಲಿ ಜಾಗೃತಿಗೊಳಿಸಬೇಕೆಂಬ ಅವರ ಸತ್ಸಂಕಲ್ಪಗಳೆಲ್ಲ ಕಾರ್ಯರೂ
ಕ್ಕಿಳಿದಿವೆ. ಇದೊಂದು 'ಭಾವಪುರುಷ' 'ಹಸ್ತಪುರುಷ' 'ದೃಷ್ಟಿಪುರುಷ' ಗಳನ
ಯೆಂದರೂ ತಡೆದೀತು.

**ವಸ್ತು ಪ್ರದರ್ಶನ ಪ್ರಾರಂಭ :** ಶ್ರೀಗಳವರು ಸುಮಾರು ಇಪ್ಪ
ವರ್ಷಗಳ ಹಿಂದೆಮಾಸನ ಜಾತ್ರೆಯಲ್ಲಿನಡೆಯುವ ಗ್ರಾಮಾಂತರ ಪ್ರದೇಶದ ಜನ
ಉಪಯುಕ್ತವಾದ, ವಸ್ತು ಪ್ರದರ್ಶನವನ್ನು ಉದ್ಘಾಟಿಸಲು ದಯಮಾಡಿಸಿದಾ
ಇಂಥ ಒಂದು ವಸ್ತು ಪ್ರದರ್ಶನವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀ ಸಿದ್ಧ
ಗೇಶ್ವರ. ಜಾತ್ರೆಯಸಮಯದಲ್ಲಿ ನಡೆಯುವುದಾದರೆ, ಅದರಪ್ರಯೋಜನವ
ಅಧಿಕಸಂಖ್ಯಾತ ಗ್ರಾಮಾಂತರ ಪ್ರದೇಶದ ಜನರು ನೋಡಿ ನಡೆಯಾಸು ಕೂಲವಾ
ಪುದು ಎಂಬ ಸಂಕಲ್ಪ ಅವರ ಪುರುಷಶಕ್ತಿಯ ಭಾವನೆಗೆ ಬಂತು. ಈ ಸತ್ಸಂಕ
ವನ್ನು ಕ್ಷೇತ್ರಕ್ಕೆ ದಯಮಾಡಿಸಿದ ಕೆಲದಿನಗಳಲ್ಲಿ ಕ್ಷೇತ್ರದ ಹಳೆಯವಿದ್ಯಾರ್ಥಿಸಂಘ
ಪ್ರತಿನಿಧಿಗಳಾದ ಅಗಿನ ತುಮಕೂರು ಪಾಲಿಟೆಕ್ನಿಕ್ ಪ್ರಿನ್ಸಿಪಾಲರಾಗಿದ್ದ ಶ್ರೀ ಆ
ಸಿದ್ದಯ್ಯ, ಶ್ರೀ ಐ. ಎಸ್. ಶಿವಣ್ಣ. ಶ್ರೀ ಬಿ. ಟಿ. ರಂಗಧಾಮಯ್ಯ, ಶ್ರೀ ಎಸ್.
ಸಿದ್ದಗಂಗಯ್ಯ, ಶ್ರೀ ಎಸ್. ಸಿದ್ದಗಂಗಯ್ಯ ಲಿಂ. ಹೆಚ್. ಬಿ. ಗುರುಬಸವದೇವ

ಶ್ರೀ ಎಂ. ಎನ್. ಚನ್ನಬಸಪ್ಪ, ಇವರೇಮೊದಲಾದ ಅನೇಕರಲ್ಲಿತಿಳಿಸಿದರು. ಹಳೆಯ ವಿದ್ಯಾರ್ಥಿ ಸಂಘವು ಶ್ರೀಗಳವರ ಈ ಸತ್ಸಂಕಲ್ಪವನ್ನು ಕಾರ್ಯರೂಪಕ್ಕೆತರಲುಒಪ್ಪಿ. ಅವರ ಆಶೀರ್ವಾದ ಬಲದಿಂದ "**ಶ್ರೀ ಸಿದ್ಧಲಿಂಗೇಶ್ವರ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ**" ಎಂಬ ಹೆಸರಿನಲ್ಲಿ ೧೯೬೩ ನೆಯ ಇಸ್ವಿಯ ಶ್ರೀಕ್ಷೇತ್ರದ ಜಾತ್ರಾಮಹೋತ್ಸವದಲ್ಲಿ ವಸ್ತು ಪ್ರದರ್ಶನವನ್ನು ಸಣ್ಣದಾಗಿ ಪ್ರಾರಂಭ ಗೊಳಿಸಿದರು.

**ವಸ್ತು ಪ್ರದರ್ಶನದ ಅಭಿವೃದ್ಧಿ :** ವಸ್ತು ಪ್ರದರ್ಶನವು ಪ್ರಾರಂಭವಾದ ಮೊದಲ ಎರಡುವರ್ಷ. ತಾಲೂಕು ಮಟ್ಟದಲ್ಲೂ, ಮೂರು, ನಾಲ್ಕು, ಐದು ವರ್ಷ ಜಿಲ್ಲಾ ಮಟ್ಟದಲ್ಲೂ, ಆಮೇಲೆ ರಾಜ್ಯಮಟ್ಟದಲ್ಲೂ ಯಶಸ್ವಿಯಾಗಿ ಕೆಲಸಮಾಡಿ, ತನ್ನಮೂಲಭೂತ ಉದ್ದೇಶಗಳನ್ನು ಈಡೇರಿಸುವುದರಲ್ಲಿ ಯಶಸ್ಸನ್ನುಗಳಿಸತೊಡಗಿ ಶ್ರೀಗಳವರಿಗೆ ಹರ್ಷವನ್ನಿತ್ತಿತು.

ವಸ್ತು ಪ್ರದರ್ಶನದ ಪ್ರಾರಂಭದ ದಿಸೆಯಲ್ಲಿ ಮೊದಲನೆಯ ಎರಡುಮೂರು ವರ್ಷಗಳು ಕ್ಷೇತ್ರದ ಹಳೆಯವಿದ್ಯಾರ್ಥಿಗಳು ಹಾಲಿಕ್ಷೇತ್ರದಲ್ಲಿರುವ ಅನೇಕ ವಿದ್ಯಾರ್ಥಿ ಗಳೂ, ಉಪಾಧ್ಯಾಯರೂ. ವಿಶೇಷವಾಗಿ ಶ್ರದ್ಧಾ, ಭಕ್ತಿವಿಶ್ವಾಸಗಳಿಂದ ಶ್ರಮಿಸಿ ಅದು ಪ್ರವರ್ಧಮಾನಕ್ಕೆಬರಲು ಕಾರಣೀ ಭೂತರಾಗಿದ್ದಾರೆ.

**ವಸ್ತು ಪ್ರದರ್ಶನದಲ್ಲಿ :** ಈಗ ವಸ್ತು ಪ್ರದರ್ಶನಕ್ಕೆ ರಾಜ್ಯಸರಕಾರದ ಎಲ್ಲ ಇಲಾಖೆಗಳ ಮಳಿಗೆಗಳೂ, ಭಾರತಸರಕಾರದ ಅನೇಕ ಮಳಿಗೆಗಳೂ ಮತ್ತು ಖಾಸಗಿಯವರ, ಸಂಘಸಂಸ್ಥೆಗಳವರ ಹಲವಾರು ಮಳಿಗೆಗಳೂ ಕರೆಯಲ್ಪಟ್ಟು ವಸ್ತು ಪ್ರದರ್ಶನದ ಉದ್ದೇಶವು ಬಹುಮಟ್ಟಿಗೆ ಫಲಪ್ರದವಾಗಹತ್ತಿದೆ. ಲಕ್ಷಾಂತರ ಜನರು ಪ್ರದರ್ಶನಕ್ಕೆ ಸಂದರ್ಶನವಿತ್ತು ವೈವಿಧ್ಯಮಯವಾದ ಜ್ಞಾನಮಾಡಿಕೊಳ್ಳಲು ಸಹಕಾರಿ ಯಾಗಿದೆ.

ಶ್ರೀಸಿದ್ಧಗಂಗಾಕ್ಷೇತ್ರವು, ಗ್ರಾಮಾಂತರ ಪ್ರದೇಶದ ಮಧ್ಯವರ್ತಿಸ್ಥಾನವಾಗಿದ್ದು ಅಧಿಕ ಪ್ರಮಾಣದಲ್ಲಿ ಗ್ರಾಮೀಣಜನರು, ರೈತರು, ಚಿಕ್ಕ ಚಿಕ್ಕ ಕೈಗಾರಿಕೋದ್ಯಮಿ ಗಳು, ಯಾತ್ರಾರ್ಥಿಗಳು ಜಾತ್ರೆಗೆ ಸೇರುವುದರಿಂದ ಅವರೆಲ್ಲರ ಪ್ರದರ್ಶನಯೋಗ್ಯ ವಾಗಿರಬೇಕೆಂಬ ಮೂಲೋದ್ದೇಶದಮೇರೆಗೆ ವ್ಯವಸಾಯ ಮತ್ತು ಕೈಗಾರಿಕಾ ಪ್ರದ ರ್ಶನಗಳಿಗೆ ವಿಶೇಷಾಸಕ್ತಿಯನ್ನು ಕೊಡಲಾಗಿದೆ. ಅಂತೆಯೇ ಅದರ ಜನಪ್ರಿಯತೆ ವರ್ಷದಿಂದ ವರ್ಷಕ್ಕೆ ಅಧಿಕವಾಗತೊಡಗಿದೆ. ಮೊದಲಿನ ಮೂರು ನಾಲ್ಕು ವರ್ಷ ಗಳು ವಸ್ತು ಪ್ರದರ್ಶನಕ್ಕೆ ಭೇಟಿಕೊಡುವವರ ಸಂಖ್ಯೆ ಕಡಿಮೆ ಇದ್ದರೂ, ಕ್ರಮೇಣ ಇತ್ತೀಚಿನ ವರ್ಷಗಳಲ್ಲಿ ಲಕ್ಷಾಂತರ ಸಂಖ್ಯೆಯ ಜನರು ಭೇಟಿಕೊಡುತ್ತಿರುವುದು

ಅದರ ಜನಪ್ರಿಯತೆಗೊಂದು ಪ್ರತ್ಯಕ್ಷಸಾಕ್ಷಿಯಾಗಿದೆ.

**ಸಾಂಸ್ಕೃತಿಕ ಕಾರ್ಯಕ್ರಮಗಳು :** ಪ್ರಾರಂಭದಿಂದಲೂ ವಸ್ತು ಪ್ರದರ್ಶ ದಲ್ಲಿ ಉತ್ತಮಮಟ್ಟದಲ್ಲಿ ಸಾಂಸ್ಕೃತಿಕ ಹಾಗು ಮನರಂಜನಾ ಕಾರ್ಯಕ್ರಮಗಳನ್ನ ಏರ್ಪಡಿಸುತ್ತ ಬರಲಾಗಿದೆ. ವಿದ್ವಾಂಸರಿಂದ ವಿವಿಧವಿಷಯಗಳಬಗೆಗೆ ಉಪನ್ಯಾ ಸಗಳು. ಕಾವ್ಯವಾಚನಗಳು, ಉತ್ತಮ ನಾಟಕಗಳು, ನೃತ್ಯಗಳು, ಸಂಗೀತಕಛೇ ಗಳೇ ಮೊದಲಾದವುಗಳು ಇದಕ್ಕಾಗಿಯೇ ಪ್ರದರ್ಶನನಿವೇಶನದ ಮಹಾದ್ವಾರಕ್ಕೆ ಎದುರಾಗಿ ನಿರ್ಮಿಸಲಾಗುವ ಭವ್ಯ-ಸುಸಜ್ಜಿತ ರಂಗಮಂಟಪದಲ್ಲಿ ನಡೆಯುತ್ತಿವೆ ಕರ್ನಾಟಕದ, ಮದ್ರಾಸು ಪ್ರಾಂತ್ಯದ ವಿವಿಧನಾಟಕಸಂಸ್ಥೆಗಳು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಿವೆ. ಖ್ಯಾತ ಸಾಹಿತಿಗಳು, ಗಮಕಿಗಳು, ಚಲನಚಿತ್ರನಟನಟಿಯರು ನೃತ್ಯಕಲಾನಿಪುಣರು ಭಾಗವಹಿಸುತ್ತಿದ್ದಾರೆ. ಜಗತ್ಪ್ರಸಿದ್ಧ ಭದ್ರತನಾಟ್ಯವಿಶಾರದ ರಾದ ಶ್ರೀ ಯು. ಎಸ್. ಕೃಷ್ಣರಾವ್-ಚಂದ್ರಭಾಗಾದೇವಿ ಇವರು ಈರಂಗಮಂಟಪ ದಲ್ಲಿ ತಮ್ಮ ಕಲಾನೈಪುಣ್ಯವನ್ನು ಪ್ರದರ್ಶಿಸಿದ್ದಾರೆ. ಎಂಬ ಒಂದು ಉದಾಹರಣೆ ಪ್ರಕೃತಸಾಕು.

**ವಸ್ತು ಪ್ರದರ್ಶನಕ್ಕೆ ಭೇಟಿಇತ್ತ ಹಿರಿಯರು :** ವಸ್ತು ಪ್ರದರ್ಶನಕ್ಕೆ ಹಿಂದೇ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ವಿ. ವಿ. ಗಿರಿ, ಅಖಿಲಭಾರತ ಕಾಂಗ್ರೆಸ್ ಅಧ್ಯಕ್ಷ ರಾಗಿದ್ದ ಶ್ರೀ ನಿಜಲಿಂಗಪ್ಪ, ಕೇಂದ್ರಕಾರ್ಮಿಕ ಮಂತ್ರಿ ಶ್ರೀ ವೀರೇಂದ್ರಪಾಟಿಲ್, ಕರ್ನಾಟಕ ಮಂತ್ರಿಮಂಡಲದ ಸಾಮಾನ್ಯವಾಗಿ ಎಲ್ಲ ಮಂತ್ರಿಗಳು, ಭಾರತದ ಕೈಗಾ ರಿಕೋದ್ಯಮಿ ಬಿರ್ಲಾ, ಭಾರತಸರಕಾರದ ಮಾಜಿಸ್ಟೇಟ್ ಸಚಿವರಾಗಿದ್ದ ಶ್ರೀ ಎಂ. ಎಸ್. ಗುರುಪಾದಸ್ವಾಮಿ'ಉಪರಾಷ್ಟ್ರಪತಿಗಳಾಗಿದ್ದ ಶ್ರೀ ಜತ್ತಿ ಕರ್ನಾಟಕದ ಮಾಜಿ ಮುಖ್ಯ ಮಂತ್ರಿಗಳಾದ ದಿ|| ಕೆಂಗಲ್‌ಹನುಮಂತಯ್ಯ ಮಾನ್ಯ ದಿ|| ವಿಂ. ವಿ. ಕೃಷ್ಣ ಪ್ಪನವರು ಸಂಸತ್‌ಸದಸ್ಯ ಪ್ರಕಾಶ್ ವೀರಶಾಸ್ತ್ರೀ ಇವರೇ ಮೊದಲಾದವರೂ. ಕರ್ನಾ ಟಕ ರಾಜ್ಯದ ವಿವಿಧ ಇಲಾಖೆಗಳ ಉನ್ನತಾಧಿಕಾರಿಗಳೂ. ದೊಡ್ಡ ದೊಡ್ಡ ಕೈಗಾರಿಕಾ ಸಂಘ-ಸಂಸ್ಥೆಗಳವರೂ ಸಂದರ್ಶನಕೊಟ್ಟು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಗ್ರಾಮಾಂತರ ಪ್ರದೇಶದ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ವಾದ ಇದು ಶಾಶ್ವತವಾಗಿ ಈ ಕ್ಷೇತ್ರದಲ್ಲಿ ಇತೋಪ್ಯತಿಶಯವಾಗಿ ನಡೆದುಕೊಂಡು ಬರಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ವಸ್ತು ಪ್ರದರ್ಶನ ಸಮಿತಿಯವರೂ ಕೂಡ ಈ ವಸ್ತು ಪ್ರದರ್ಶನವು ಉತ್ತರೋತ್ತರ ಶಾಶ್ವತವಾಗಿ ಸಾರ್ವಕಾಲಿಕ ವಸ್ತು ಪ್ರದರ್ಶನವಾಗಿ ನಿಲ್ಲುವಂತೆ ಪ್ರಯತ್ನಿಸತೊಡಗಿದ್ದಾರೆ. ಇದಕ್ಕೆ ಸರಕಾರದ, ಮತ್ತು ಜನತೆಯ ಬೆಂಬಲಗಳಿಸುವ ದಿಸೆಯಲ್ಲಿ ವಿಶೇಷ ಪ್ರಯತ್ನಗಳು ನಡೆಯುತ್ತಿವೆ.

**ಖರ್ಚುವೆಚ್ಚಗಳು:** ಪ್ರಾರಂಭದ ಹಂತದಲ್ಲಿ ಅಂದರೆ ಮೊದಲ ಎರಡು ುರುವರ್ಷಗಳು ವಸ್ತು ಪ್ರದರ್ಶನದ ಖರ್ಚುವೆಚ್ಚಗಳು ಹೆಚ್ಚಾಗಿ ಆದಾಯ ಕಡಿಮೆ ಾಯಿತು. ಆದರೂ ಸಮಿತಿಯು ಧೈರ್ಯಗೆಡದೆ ಕಾರ್ಯವನ್ನು ನಷ್ಟದಲ್ಲಿಯೇ ಮುಂದು ರಿಸಿತು. ಆ ನಷ್ಟವನ್ನು ಶ್ರೀಕ್ಷೇತ್ರವೇವಹಿಸಿಕೊಂಡಿತು. ಆದರೆ ಇತ್ತೀಚಿನ ವರ್ಷ ಳಲ್ಲಿ ಖರ್ಚುವೆಚ್ಚಗಳು ಆದಾಯಕ್ಕೆ ಸಮಸಮನಾಗಿನಿಂತು ಸಮಿತಿಯಾಗಲಿ, ಶ್ರೀ ್ಷೇತ್ರವಾಗಲಿ ನಷ್ಟಕ್ಕೊಳಗಾಗಲಿಲ್ಲ. ಆದರೆ ಲಾಭದ ಉದ್ದೇಶವು ಸಮಿತಿಗಾಗಲಿ, ೀ ಶ್ರೀಗಳವರಿಗಾಗಲಿ ಇಲ್ಲ. ಜನತೆಗೆ ಪ್ರಯೋಜನವಾಗಬೇಕೆಂಬುದೇ ೂಲೋದ್ದೇಶ. ಒಂದುವೇಳೆ ಲಾಭದಯಕವಾಗಿ ಆದರೂ, ಆ ಲಾಭದ ಹಣವನ್ನು ್ರದರ್ಶನದ ಉತ್ತರೋತ್ತರ ಅಭಿವೃದ್ಧಿಗಾಗಿ ವೆಚ್ಚಮಾಡಲಾಗುವುದು. ಅದರನ್ವಯ ಸ್ತು ಪ್ರದರ್ಶನದ ಮೈದಾನಕ್ಕೆ ಎರಡು ಪಾರ್ಶ್ವದಲ್ಲಿಯೂ ಎತ್ತರವಾಗಿ ಗೋಡೆ ಹಾಕ ಾಗಿವೆ. ಮುಂಭಾಗದಲ್ಲಿ ಸುಭದ್ರವಾದ ಕಲ್ಲಿನ ಕಟ್ಟಡವನ್ನು ಅಂದವಾಗಿ ನಿರ್ಮಿಸ ಾಗಿದೆ. ಮಧ್ಯದಲ್ಲಿ ಅಲಂಕಾರಕ್ಕಾಗಿ ಶಾಶ್ವತವಾದ ಒಂದು ಪಾರ್ಕನ್ನು ರಕ್ಷಿಸಿ ೊಂಡು ಸಾಕಲಾಗುತ್ತಿದೆ. ವಸ್ತು ಪ್ರದರ್ಶನ ಉಪಯೋಗಕ್ಕಾಗಿ ಒಂದು ಬೋರ್ ೆಲ್‌ನ್ನು ಹಾಕಲಾಗಿದೆ. ಸುಸಜ್ಜಿತವ್ಯವಸ್ಥೆಗಾಗಿ ಹಲವು ಅತ್ಯುಪಯುಕ್ತ ಸಲಕರ ೆಗಳನ್ನು ಸಜ್ಜಗೊಳಿಸಲಾಗಿವೆ. ಇತ್ತೀಚೆಗೆ ವಸ್ತು ಪ್ರದರ್ಶನ ವ್ಯವಸ್ಥೆಯು ಸುಸೂತ್ರ ಾಗಿ ಸಾಗಿರುತ್ತಿರುವುದು ನಾಡಿನ ಜನತೆಯ ಸುಯೋಗವೆಂದು ಭಾವಿಸಬಹುದು. ೈಜ್ಞಾನಿಕ ಜ್ಞಾನಾಭಿವೃದ್ಧಿಗೂ, ಮನರಂಜನೆ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಳಿಗೂ ವಿಶೇಷಸ್ಥಾನವಿತ್ತು ಗ್ರಾಮಾಂತರ ಪ್ರದೇಶದಜನರಿಗೆ ಅನುಕೂಲ ಕಲ್ಪಿಸಿ ೊಡುವ ಮಾರ್ಗದಲ್ಲಿ ವರ್ಷೇವರ್ಷೇ ಪ್ರವರ್ಧಮಾನಕ್ಕೆ ಬರುತ್ತಿರುವ "ವ್ಯವಸಾಯ ುತ್ತು ಕೈಗಾರಿಕಾ ವಸ್ತು ಪ್ರದರ್ಶನ" ವು ಕೆಲವೇವರ್ಷಗಳಲ್ಲಿ ರಾಷ್ಟ್ರೀಯಮಟ್ಟದ ುಸಜ್ಜಿತ ಸಾರ್ವಕಾಲಿಕ ವಸ್ತು ಪ್ರದರ್ಶನಾಲಯವಾಗುವುದರಲ್ಲಿ ನಮಗೆ ಅಪಾರ ಂಬಿಗೆಯಿದೆ. ಈ ಕಾರ್ಯಕ್ಕೆಮುಖ್ಯವಾಗಿ ಶ್ರೀ ಶ್ರೀ ಗಳವರ ಕೃಪಾಶೀರ್ವಾದವೂ ೇಂದ್ರ ಹಾಗು ರಾಜ್ಯಸರಕಾರಗಳ, ಜನತೆಯ, ಸಂಘಸಂಸ್ಥೆಗಳ–ಸಂಪೂರ್ಣಸಹಕಾ ವೂ ಅವಶ್ಯವಾಗಿದೆ. "ಕ್ರಿಯಾಸಿದ್ಧಿಃ ಸತ್ವೇಭವತಿ ಮಹತಾಂ ನೋಪಕರಣೈಃ"

ಹೀಗಾಗಿ ಪ್ರತಿವರ್ಷವೂ ಶಿವರಾತ್ರಿಯ ಜಾತ್ರಾಸಂದರ್ಭದಲ್ಲಿ ವ್ಯವಸಾಯ ುತ್ತು ಕೈಗಾರಿಕಾ ವಸ್ತುಪದರ್ಶನವೂ ನಾಡಿನ ಸೇವೆಯನ್ನು ಯಶಸ್ವಿಯಾಗಿ ನಿರ್ವ ಹಿಸಿಕೊಂಡು ಒರುತ್ತಿದೆ. ಅಂತಯೇ ಈ ವರ್ಷವೂ ರಾಜ್ಯ ಹಾಗೂ ಕೇಂದ್ರ ಸರಕಾರದ ವಿವಿಧ ಇಲಾಖೆಗಳು ಮತ್ತು ಖಾಸಗಿ ಸಂಸ್ಥೆಗಳು ತುಂಬಾ ಉತ್ಸುಕತೆ ಯಿಂದ ಭಾಗವಹಿಸಿ ಈ ಸಾಲಿನ ಪ್ರದರ್ಶನ ಉತ್ತಮ ಮಟ್ಟದಲ್ಲಿಪ್ರದರ್ಶಿತಗೊಳ್ಳಲು ಸಹಕಾರಿಯಾಗಿದ್ದವು. ತಾ|| 2-2-83 ರಂದು ವಸ್ತುಪ್ರದರ್ಶನದ ಉದ್ಘಾಟನಾ

ಸಮಾರಂಭಕ್ಕೆ ಕರ್ನಾಟಕ ಸರಕಾರದ ಲೋಕೋಪಯೋಗಿ ಮಂತ್ರಿಗಳಾದ
ಹೆಚ್. ಡಿ. ದೇವೇಗೌಡರು ಭಾಗವಹಿಸಿದ್ದರು. ಮೈಸೂರು ಬ್ಯಾಂಕಿನ ಜನರ
ಮ್ಯಾನೇಜರ್ ಶ್ರೀ ಸಿ. ಶಿವಶಂಕರ್‌ರವರು ಅತಿಥಿಗಳಾಗಿ ಆಗಮಿಸಿದ್ದರು.
16-2-83 ರಂದು ನಡೆದ ಮುಕ್ತಾಯ ಸಮಾರಂಭಕ್ಕೆ ರಾಜ್ಯದ ಕೈಗಾರಿಕೆ ಸ
ರಾದ ಶ್ರೀ ಎಸ್. ಆರ್. ಬೊಮ್ಮಾಯಿಯವರು ಮತ್ತು ಕೃಷಿ ಸಚಿವರಾದ
ಎಸ್. ರೇವಣ್ಣನವರು ಆಗಮಿಸಿದ್ದರು. ಶಾಸಕರಾದ ಶ್ರೀ ಲಕ್ಷ್ಮೀನರಸಿಂಹಯ್ಯನ
ಉತ್ತಮ ಮಟ್ಟದ ಪ್ರದರ್ಶಿಸಿ ಬಹುಮಾನ ಗಳಿಸಿದ ತುಮಕೂರಿನ ಹೆ
ಎಂ. ಟಿ. ಗಡಿಯಾರ ಕಾರ್ಖಾನೆ, ಅರಣ್ಯ ಮತ್ತು ವ್ಯವಸಾಯ ಇಲಾಖೆಗ
ಪ್ರಥಮ ಪರ್ಯಾಯ ಪಾರಿತೋಷಕ ಬಹುಮಾನವನ್ನು ಮತ್ತು ಇತರ ಮಳಿಗೆ
ಳಿಗೂ ಬಹುಮಾನ ಮತ್ತು ಪ್ರಶಸ್ತಿ ಪತ್ರಗಳನ್ನು ವಿತರಣೆ ಮಾಡಿದರು. ಎ
ಗಿಂತ ಈ ಸಾಲಿನ ಪ್ರದರ್ಶನ ಉತ್ತಮ ಮಟ್ಟದಲ್ಲಿ ಪ್ರದರ್ಶಿತವಾಗಿತ್ತು ಎಂಬು
ಹಲವು ಮುಖಂಡರ ಅಭಿಪ್ರಾಯ. ಹೀಗೆ ದಿನೇದಿನೆ ಅಭಿವೃದ್ಧಿಯನ್ನು ಸಾಧಿಸ
ಶ್ರೀ ಸಿದ್ಧಲಿಂಗೇಶ್ವರ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವು ವ್ಯವಸ್ಥಿ
ವಾಗಿ ನಡೆದುಕೊಂಡು ಬರಲು ಪೂಜ್ಯರ ಆಶೀರ್ವಾದ, ಶ್ರೀ ಕ್ಷೇತ್ರದ ಹಳೆ
ವಿದ್ಯಾರ್ಥಿ ಮಿತ್ರರು ಮತ್ತು ಸದರಿ ಅಭ್ಯಾಸ ಮಾಡುತ್ತಿರು ಮಕ್ಕಳು ಕ್ಷೇತ್ರದ
ಎಲ್ಲಾ ವಿದ್ಯಾಸಂಸ್ಥೆಗಳ ಮುಖ್ಯರು ಮತ್ತು ಅವರ ಸಹೋದ್ಯೋಗಿಗಳ ಪೂ
ಸಹಕಾರ ಮುಖ್ಯ ಕಾರಣ ಎಂದು ಹೇಳುತ್ತಾ ಮುಂದೆಯೂ ಎಲ್ಲರ ಪೂರ್ಣ
ಕಾರ ಅವ್ಯಾಹತವಾಗಿ ಸಾಗಿ ಬರಲೆಂದು ಶ್ರೀ ಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರ
ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

# ಶ್ರೀ ಪುರಂದರದಾಸರ ಉಪದೇಶ

—ಶ್ರೀ ಭದ್ರಗಿರಿ ಅಚ್ಯುತದಾಸರು

"ಲೋಕಸಂಗ್ರಹಮೇವಾಪಿ ಸಂಪಶ್ಯನ್‌ಕರ್ತುಮರ್ಹತಿ" ಕರ್ಮದಿಂದ ತನಗೇನೂ ಪ್ರಯೋಜನವಿಲ್ಲದಿದ್ದರೂ ಇತರರಿಗೆ ನಿಷ್ಕಾಮ ಕರ್ಮದಲ್ಲಿ ರುಚಿಯು ನ್ನುಂಟುಮಾಡುವ ಸಲುವಾಗಿ ಅಪರೋಕ್ಷ ಜ್ಞಾನಿಗಳೂ ಕೂಡಾ ಕರ್ಮ ಮಾಡ ಬೇಕೆಂದು ಗೀತಾಚಾರ್ಯ ಭಗವಾನ್ ಶ್ರೀ ಕೃಷ್ಣ ಪರಮಾತ್ಮನು ಅಪ್ಪಣೆ ಕೊಟ್ಟಿ ದ್ದಾನೆ. ಹಾಗೆಯೇ ಅಪರೋಕ್ಷ ಜ್ಞಾನಿಗಳಾದ (ಪರಮಾತ್ಮನನ್ನು ಕಂಡವರು) ಜೀವನ್ಮುಕ್ತ ಶ್ರೀ ಪುರಂದರದಾಸರು ಲೋಕಸಂಗ್ರಹಕ್ಕಾಗಿ ಆ ಕಾಲದ ಜನರ ನಡೆ, ನುಡಿಗಳನ್ನು ತಿದ್ದಲು, ಹದವಾಗಿ, ಮೆದುವಾಗಿ ಚುಚ್ಚಿ, ಮೆಚ್ಚಿ, ಮುನಿಸಿನಿಂದ, ಮಮತೆಯಿಂದ ಮಾಡಿದ ಉಪದೇಶ ಪದ್ಧತಿಯನ್ನು ಅವಲೋಕಿಸುವುದು ಈ ಲೇಖ ನದ ಉದ್ದೇಶ.

ಧರ್ಮಕ್ಕೆ ಕೈಬಾರದೀಕಾಲ—
ಪಾಪ ಕರ್ಮಕ್ಕೆ ಮನಸೋಲ್ಲೋದೀ ಕಲಿ ಕಾಲ ||
ದಂಡ ದೇಹಕೆ ಉಂಟು | ಪುಂಡು ಪೋಕರಿಗುಂಟು |
ಹೆಂಡತಿ ಮಕ್ಕಳಿಗೆ ಇಲ್ಲವೀ ಕಾಲ | ದಿಂಡೆರಿಗುಂಟು ಜಗ ಭಂಡರಿಗುಂಟು—
ಅಂಡಲೆವರಿಗಿಲ್ಲವೀ ಕಾಲ ||

ಈ ಕೀರ್ತನೆಯಲ್ಲಿ ದಾಸರು ನೀತಿಗೆಟ್ಟ ಸಮಾಜದ ನೈಜ ಚಿತ್ರವನ್ನು ನಮ್ಮ ಮುಂದೆ ಇಡುತ್ತಾರೆ. ದಾನಧರ್ಮಾದಿ ಭಾವನೆಯಿಂದ ಪ್ರೇರಿತವಾದ ಸಮಾಜದಲ್ಲಿ ಆರ್ಥಿಕ ಸಮತೋಲನವೂ, ಸಮಾನತೆಯೂ ಸಹಜವಾಗಿ ಪ್ರಾಪ್ತವಾಗುತ್ತದೆ. ದಾನ ಮಾಡದೇ ಭೋಗಿಸುವವನನ್ನು "ಕಳ್ಳ" ಎಂದು ಗೀತೆಯಲ್ಲಿ ಹೇಳಿದೆ. "ದಾನವೇ ಭೂಷಣ ಎರಡೂ ಹಸ್ತಂಗಳಿಗೆ" ಎಂದು ಶ್ರೀಪಾದರಾಯರ ವಚನ. "ಹಾತದಿಯಾ ಕರೇದಾನ" ದಾನಗಳಿಗಾಗಿಯೇ ಕೈಗಳು ಕೊಡಲ್ಪಟ್ಟಿವೆ ಎಂದು ಸಂತ ಕಬೀರರ ವಚನ ವಿದೆ. ಆದರೆ ಇದು ಕಲಿಕಾಲ. ಧರ್ಮಕ್ಕೆ ಕೈಬಾರದು; ಪಾಪಕರ್ಮಕ್ಕೆ ಮನ ಸೋಲ್ಲುವುದು ಎನ್ನುತ್ತಾರೆದಾಸರು. ಜನರ ಈ ಬುದ್ಧಿ ನೋಡಿ ಇದು ಕಲಿಕಾಲ ಎಂದು ದಾಸರು ಅನುಮಾನಿಸಿದುದು ಸೂಕ್ತವೇ ಆಗಿದೆ. ಈ ಕುರಿತು ಬ್ರಹ್ಮ ಪುರಾಣ ದಲ್ಲಿ ಹೀಗೆ ಹೇಳಿದೆ.

ಯದಾ ಯದಾಹಿ ಪಾಖಂಡ ವೃತ್ತಿರತ್ರೋಪ ಲಕ್ಷ್ಯತೆ ।
ತದಾ ತದಾ ಕಲೆ ವೃದ್ಧಿರನುಮೇಯಾ ವಿಚಕ್ಷಣೈಃ ॥

(ಬ್ರಹ್ಮ ಪುರಾಣ 229-44)

ಬ್ರಾಹ್ಮಣರೇ! ಎಂದು ಈ ಜಗತ್ತಿನಲ್ಲಿ ಪಾಖಂಡ ವೃತ್ತಿಯು ದೃಷ್ಟಿಗೋಚರ ವಾಗುವುದೊ ಆಗ ಕಲಿಕಾಲವು ವೃದ್ಧಿಯಾಗುವುದೆಂದು ವಿದ್ವಾಂಸನಾದ ಪುರುಷನು ಅನುಮಾನಿಸಬೇಕು.

ಪಾಖಂಡರೆಂದರೆ, ದೇಹವೇ ದೇವರು, ಭೋಜನವೇ ಭಕ್ತಿ, ಮರಣವೇ ಮುಕ್ತಿ ಎನ್ನುವ ಜನರು. ("ದೇಹತೆ ದೇವ, ಭೋಜನತೆ ಭಕ್ತಿ, ಮರಣತೆ ಮುಕ್ತಿ ಪಾಖಂಡ್ಯಾಚೆ"—ಸಂತ ತುಕಾರಾಮರು)

ಹೀಗೆ ಧರ್ಮಕ್ಕೆ ಕೈಬಾರದ, ಪಾಪ ಕರ್ಮಕ್ಕೆ ಮನಸೋಲುವ ಜನರನ್ನು ಕಂಡು ಶ್ರೀ ಪುರಂದರದಾಸರು ಇದು ಕಲಿಕಾಲ ಎಂದು ಅನುಮಾನಿಸುತ್ತಾರೆ.

ಮೂರ್ಖರು ತಮ್ಮ ಕೈಯಲ್ಲಿ ಅಪಾರ ಧನವಿದ್ದರೂ ಅದನ್ನು ಸತ್ಕಾರ್ಯಕ್ಕೆ ಧರ್ಮಕಾರ್ಯಕ್ಕೆ ವಿನಿಯೋಗಿಸರು. ಜೂಜು, ಸ್ಪರ್ಧೆ, ಭೋಗ, ವ್ಯಭಿಚಾರ ಇವುಗಳಲ್ಲಿ ತೊಡಗಿಸುವರು. ನಾರದ ಪುರಾಣದಲ್ಲಿ ಭಗವಾನ ಕಪಿಲ ಮಹರ್ಷಿಗಳ ವಚನವಿಂತಿದೆ.

"ಭವೇದ್ಯದಿ ಖಲಸ್ಯ ಶ್ರೀಃ ಸೈವ ಲೋಕವಿನಾಶಿನಿ"
ದುಷ್ಟನಲ್ಲಿ ಇರುವ ಸಂಪತ್ತು ಲೋಕನಾಶಕ್ಕೆ ಕಾರಣವಾಗುವುದು "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೇ ಪಂಚಾಮೃತಕ್ಕೆ ಸಲ್ಲದಯ್ಯಾ" ನಾಯಿಯ ಹಾಲು ನಾಯಿ ಮರಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ ಎಂಬ ಶರಣ ಬಸವಣ್ಣನವರ ವಚನದಂತೆ, ಈ ಕಲಿಕಾಲದ ಜನರು ದಂಡ ದ್ರೋಹಕೆ ಪುಂಡುಪೋಕರಿಗೆ ಹಣ ಸುರಿಸುವರು ಎಂಬ ಪುರಂದರದಾಸರ ಮಾತು ಪ್ರತ್ಯಕ್ಷಾನುಭವ.

ಐಶ್ವರ್ಯ ಮದ ಮತ್ತಾನಾಂ ಕ್ಷುಧಿತಾನಾಂ ಚ ಕಾಮಿನೀಂ ।
ಅಹಂಕಾರವಿಮೂಢಾನಾಂ ವಿವೇಕೋನೈವ ಜಾಯತೆ ॥

(ಭಗವಾನ ಕಪಿಲ—ನಾರದ ಪುರಾಣ. 8.103)

ಧನಮದದಿಂದ ಉನ್ಮತ್ತನಾದವನು, ಹಸಿದವನೂ, ಕಾಮಾತುರನೂ, ಅಹಂಕಾರದಿಂದ ಮೂಢನಾದವನಿಗೂ ವಿವೇಕ ಉದಯವಾಗುವುದೇ ಇಲ್ಲಾ.

ಮೇಲಿನ ಕೀರ್ತನೆಯಲ್ಲಿ ದಾಸರು—ಕಲಿಕಾಲದ ಲಕ್ಷಣ ಹೇಳುತ್ತಾ—ದಂಡ ದ್ರೋಹಕೆ ಉಂಟು ಪುಂಡು ಪೋಕರಿಗುಂಟು। ಹೆಂಡತಿ ಮಕ್ಕಳಿಗಿಲ್ಲವೀಕಾಲ" ಎನ್ನು ತ್ತಾರೆ.

ಯದಾ ಯದಾ ಸತಾಂ ಹಾನಿರ್ವೇದ ಮಾರ್ಗನು ಸಾರಿಣಾಮ್ ।
ತದಾ ತದಾ ಕಲೆರ್ವೃದ್ಧಿದನುಮೇಯಾ ವಿಚಕ್ಷಣೈಃ ॥
ಪ್ರಾರಂಭಾಶ್ಚಾವಸೀದಂತಿ ಯದಾ ಧರ್ಮಕೃತಾಂ ನೃಣಾಮ್ ।
ತದಾನುಮೇಯಂ ಪ್ರಾಧಾನ್ಯಂ ಕಲೇರ್ವಿಪ್ರಾ ವಿಚಕ್ಷಣೈಃ ॥

(ಬ್ರಹ್ಮಪುರಾಣ. 229-45, 46

ವೇದ ಮಾರ್ಗಾನುಸಾರಿಗಳಾದ ಸಾಧುಗಳಾದ ವಿದ್ವಾಂಸರಿಗೆ ಎಂದು ಹಾ ಉಂಟಾಗುತ್ತದೋ ಆಗ ಕಲಿವೃದ್ಧಿಯಾಗಿದೆ ಎಂದು ವಿದ್ವಾಂಸರು ತಿಳಿಯಬೇಕು ಎಂದು ಧರ್ಮಾತ್ಮರಿಂದ ಪ್ರಾರಂಭವಾದ ಸತ್ಕಾರ್ಯಗಳು ಶಿಥಿಲವಾಗುತ್ತಾ ಬರ ವೇವೊ ಆಗ ವಿದ್ವಾಂಸನಾದವನು ಮುಖ್ಯವಾಗಿ ಕಲಿವೃದ್ಧಿಯಾಗಿದೆ ಎಂದು ತಿಳಿಯ ಬೇಕು ಹೀಗೆ ಬ್ರಹ್ಮಪುರಾಣದ ವೇದವ್ಯಾಸರ ಶ್ಲೋಕಗಳನ್ನು ಈ ಕೀರ್ತನೆಯಲ್ಲಿ ದಾಸರು ಕನ್ನಡಿಸಿದ್ದಾರೆ ಎನ್ನಬಹುದು.

ನಿಜವಾದ ಕೈಹಿಡಿದ ಹೆಂಡತಿ ಮಕ್ಕಳಿಗೆ ಈ ಕಾಲದಲ್ಲಿ ಸರಿಯಾದ ಸಂರಕ್ಷಣ ಇಲ್ಲಾ—ಆದರೆ "ದಿಂಡೇರಿಗುಂಟು ಜಗ ಧಂಡರಿಗುಂಟು । ಅಂಡಲೆಯುವರಿಗೆ ಇಲ್ಲವಿ ಕಾಲ."

ಈ ಕೀರ್ತನೆಯಲ್ಲಿ ದಾಸರು ಕಲಿಕಾಲ ಲಕ್ಷಣ ಹೇಳುತ್ತಾ ಸುಳ್ಳು ಹೇಳುವವ ರಿಗೆ, ನಿತ್ಯ ವ್ಯಭಿಚಾರಾದಿ ದುರ್ಮಾರ್ಗದಲ್ಲಿರುವವರಿಗೆ ಈ ಕಾಲ ಸುಖ. ಉತ್ತಮ ರಿಗೆ ಈ ಕಾಲವಲ್ಲಾ. ತೊತ್ತು ತಾಡಕಿಯರು ಈ ಕಾಲ ಮೆರೆಯುತ್ತಾರೆ. ಹೆತ್ತ ತಾಯಿಗೆ ಈ ಕಲಿಕಾಲದಲ್ಲಿ ಸುಖವಿಲ್ಲಾ ಎನ್ನುತ್ತಾರೆ. ನಿಜವಾಗಿ ಈಗ ಜನರು ಮನೆಯ ಕೂಲಿಯ ಆಳಿಗೆ ಹೆದರಿ ನಡೆಯುವಷ್ಟು ಅವನಿಗೆ ತೋರುವ ಗೌರವದಷ್ಟೂ ತಾಯಿಗೆ ತೋರುತ್ತಿಲ್ಲಾ.

"ಮಾತೆಂಸಿ ನಮಿಳೆ ಗಳ ಸರಿ—ಬಾಯಿಲೇಸಿ ಸೋನಿಯಾಂಚಿ ಸಳಿ" ತಾಯಿ ಕೇಳಿದರೆ ಆಕೆಯ ಕೊರಳಿಗೆ ಲೋಹದ ಸರವೂ "ಇಲ್ಲಾ" ಎಂಬ ಮಗ, ಹೆಂಡತಿಗೆ ಚಿನ್ನದ ಸರ ಹಾಕುತ್ತಾನೆ ಎನ್ನುತ್ತಾರೆ ತುಕಾರಾಮರು.

ತಾಟಕಿಯಂಥಾ ಹೆಂಡತಿಯನ್ನು ಹೊಗಳುತ್ತಾ ತಾಯನ್ನು "ನಾನು ಹುಟ್ಟಿ ದಂದಿನಿಂದ ಇದು ನನ್ನ ಜೆನ್ನು ಹಿಡಿದ ಭೂತ" ಎನ್ನುತ್ತಾನಂತೆ. ಇದು ಕಲಿಕಾಲದ ಲಕ್ಷಣ ಎಂದು ತುಕಾರಾಮರೂ ಒಂದೆಡೆ ಹೇಳಿದ್ದಾರೆ.

ಹುಸಿ ದಿಟವಾಯಿತು। ರಸ ಕಸವಾಯಿತು। ಸೊಸೆ ಅತ್ತೆ ದಂಡಿಸೋದೀ ಕಾಲ ಬಿಸಜಾಕ್ಷ ಪುರಂದರ ವಿಠಲನ ಮನದಲ್ಲಿ–ಸ್ತುತಿಸುವವರಿಗೆ ಇಲ್ಲವೀಕಾಲ.

ಳ್ಳೇ ಸತ್ಯವಾಗುತ್ತದೆ ಕಲಿಕಾಲದಲ್ಲಿ. ದೊಡ್ಡ ದೊಡ್ಡ ಓದಿದ ಕಾನೂನು ತಜ್ಞ ಲ್ಲಾ ಸೇರಿ ನ್ಯಾಯಾಲಯದಲ್ಲಿ ಇಂದಿಗೂ ಸುಳ್ಳನ್ನ ಸತ್ಯವಾಗಿಸುತ್ತಲೇ ಇದ್ದಾರೆ. ಉತ್ತಮವಾದ ಆರೋಗ್ಯದಾಯಕವಾದ ಆಹಾರಗಳೆಲ್ಲಾ ಮಾಯವಾಗಿ, ತೀಕ್ಷ್ಣ ಣವ, ಅನಾರೋಗ್ಯಕರವಾದ, ಉಲ್ಬಣಕಾರದ ಅಜೀರ್ಣಾದಿಗಳನ್ನುಂಟುಮಾಡುವ ಭಕ್ಷ್ಯಭಕ್ಷಣ, ಮಾದಕ ದ್ರವ್ಯ ಸೇವನೆ, ಕಾಮೋದ್ರೇಕವಾಗಿಸುವ ಸುಪ್ತ ವಾಸನೆ ಗಳನ್ನು ಬಡಿದೆಬ್ಬಿಸುವ ಗೀತೆ, ಕಥೆಗಳ ಶ್ರವಣ ಪಶುತ್ವ, ಪಿಸುಣತ್ವ ಇಂತಹ ವಿನಾಶ ಕಾರಿ ಲಕ್ಷಣಗಳು ಕಲಿಕಾಲದವುಗಳು.

ಅನೃತಾತ್ ಪಾರದಾರ್ಯಾಜ್ಚ ತಥಾಭಕ್ಷ್ಯಸ್ಯ ಭಕ್ಷಣಾತ್ ।
ಅಗೋತ್ರ ಧರ್ಮಾಚರಣಾತ್ ಕ್ಷಿಪ್ರಂ ನಶ್ಯತಿ ವೈ ಕುಲಮ್ ॥
(ಪದ್ಮಪುರಾಣ, 55–18)

ಅಸತ್ಯ ಭಾಷಣ, ಪರಸ್ತ್ರಿ ಸಂಗ, ಅಭಕ್ಷ್ಯ ಭಕ್ಷಣ ಹಾಗೂ ತನ್ನ ಕುಲ ಧರ್ಮಕ್ಕೆ ವಿರುದ್ಧವಾದ ಆಚರಣೆ ಇದನ್ನು ಮಾಡುವುದರಿಂದ ಕುಲವು ಶೀಘ್ರ ವಾಗಿ ನಷ್ಟವಾಗುವುದೆಂದು ಪದ್ಮಪುರಾಣದಲ್ಲಿ ಹೇಳಿದೆ.

ಈ ಪದ್ಯದ ಕೊನೆಯಲ್ಲಿ ಕಲಿಕಾಲವು ಪುರಂದರ ವಿಠಲನ ಮನದಲ್ಲಿ ಸ್ಮರಿಸುವ ವರಿಗೆ ಅನುಕೂಲವಲ್ಲಾ ಎನ್ನುತ್ತಾರೆ.

ಆದರೆ ಕಲಿಯುಗದಲ್ಲಿ ಹರಿನಾಮವ ನೆನೆದರೆ–ಕುಲಕೋಟಿಗಳು ಉದ್ಧರಿಸು ವುವೊ" ಎಂದು ಅವರೇ ಹೇಳಿದ್ದಾರೆ.

ಶ್ರೀ ಪುರಂದರದಾಸರು ತನ್ನಕಾಲದಲ್ಲಿ ಉತ್ತಮ ಕುಲದವರೆನಿಸಿದವರಲ್ಲಿ ಅನೇ ಕರು ಹೇಯತ್ವಗಳನ್ನು ಮಾಡಿಯೂ ಸಂಭಾವಿತರಂತೆ ತಿರುಗುವವರನ್ನು, ಹೊಲೆಯ ಹೊಲತಿ, ಎಂದರೆ ಇವರೇ ಎಂದು ಬೊಟ್ಟು ತೋರಿಸಿ ಹೇಳುವ ಧಾರ್ಷ್ಟ್ಯವನ್ನು ತೋರಿದವರು.

ಸತಿಗೆ ವಶನಾಗಿ ಜನನಿ ಜನಕರಿಗೆ ಅತಿ ನಿಷ್ಠುರ ಮಾಡುವವ ಹೊಲೆಯ ! ಸುತರ ಪಡೆದು ವಾರ್ಧಿಕ ಮದವೇರಿ [ಮುದಿಭ್ರಾಂತಿ] ಪತಿದ್ವೇಷ ಮಾಡುವವಳೇ ಹೊಲತಿ" ಎನ್ನುತ್ತಾರೆ. ದುರ್ಬಲ ಜನರನ್ನು ಕಂಡು ಮರುಗದವ ಹೊಲೆಯ ಮುಂತಾಗಿ ಹೇಳಿದ ದೀನಾನು ಕಂಪಿಗಳಾದ ದಾಸರು, ತಕ್ಷಣ ದುರ್ಜನರನ್ನು ತರಾ ಟೆಗೆ ತೆಗೆದುಕೊಳ್ಳುತ್ತಾರೆ. ಇವರು ''ಜಾಲಿಯ ಮರದಂತೆ, ಮೂಲಾಗ್ರ ಮುಳ್ಳು ಬಿಸಿಲಿನಲ್ಲಿ ಬಂದವರಿಗೆ ನೆರಳಿಲ್ಲಾ ಹಸಿದು ಬಂದವರಿಗೆ ಹಣ್ಣಿಲ್ಲಾ, ಕುಸುಮ ವಾಸನೆ ಇಲ್ಲಾ ಕೂಡಲು ಸ್ಥಳವಿಲ್ಲಾ. ರಸಸ್ವಾದ ವಿಷದಂತೆ ಎಂದು ದುರ್ಜನರನ್ನು

ಕಂಡು ಓಕರಿಸಿ, ಇವರಿಗೆ ಉಪದೇಶ ಮಾಡಿ ಸರಿಪಡಿಸುವುದೂ ಸಾಧ್ಯವಿಲ್ಲ ಎನ್ನು ತ್ತಾರೆ.

ಊರ ಹಂದಿಗೆ ಷಡ್ರಸಾನ್ನವಿಡಲು-ನಾರುವ ಗಂಧವ ಬಿಡುವುದುಂಟೆ ಎಂದು ದುರ್ಜನರನ್ನು "ಊರಹಂದಿ" (ಹೊಲಸು ಮಲ ತಿನ್ನುವ ಹಂದಿ ಶುದ್ಧವಾದಗೆಡ್ಡೆ ಗೆಣ ಸು ದಿನ್ನು ಕಾಡು ಹಂದಿಯಲ್ಲಾ) ಎಂದುದೂ, ಇವನಿವದ ತಟುಕೂ ಉಪಕಾರವಿಲ್ಲಾ ಬಿನ್ನಾಣದ ಮಾತಿಗೆ ಕೊರತಿಲ್ಲಾ. ಅನ್ನಕ್ಕೆ ಸೇರಿಪಕುನ್ನಿ ಇತ ಎಂದುದೂ ಎಷ್ಟು ವಿಷ್ಠುರವಾಗಿ!!!

ಬರೇ ನೀರಿನಲ್ಲಿ ಮುಳಗಿ ಮುಳಗಿ ಮ ಟ್ಟಬೇಡಾ ಮುಟ್ಟಬೇಡಾ ಎಂಬ ಮೂಢ ರನ್ನು ಕಂಡು ಅವರ ವಿಷಯದಲ್ಲಿ ಕನಿಕರ ಪಟ್ಟು, ಚರ್ಮ ತೊಳೆದರೆ ಕರ್ಮಹೋದೀ ತೇ ಥೂ! ಭಿಕನಾಸಿ! ಎನ್ನುತ್ತಾರೆ.

"ಇಚ್ಛೆಯಿಂದ ಮಲ ಮೂತ್ರ ಶರೀರವನ್ನು ನೆಚ್ಚಿತೊಳೆದರೆ ಅದು ಮಡಿಯೇ? ಅಚ್ಯುತಾನಂತನ ನಾಮವನೆನೆದು ಸ್ ಚಿತ ಕಳೆವುದೇ ನಿಜವಾದ ಮಡಿ" ಎಂದು ಆಚಾ ರದ ಅಂಧತೆಗೆ ವಿಚಾರದ ಕಣ್ಣುಗಳನ್ನು ಕೊಡುತ್ತಾರೆ.

ಸ್ನಾನವೆಂದರೆ ಬರೀ ನೀರಿನಲ್ಲ ಮುಳುಗವುದಲ್ಲಾ, ಗುಂಡು ನೀರಿನಲ್ಲಿ ಮುಳು ಗುತ್ತದೆ ಬೆಂಡು ನೀರಿನಲ್ಲಿ ತೇಲುತ್ತದೆ ಏನು ಪ್ರಯೋಜನ?

"ಸ್ನಾನ ಮಾಡಿರೋ ಜ್ಞಾನತೀರ್ಥದಲ್ಲಿ" ಎನ್ನುವ ದಾಸರ ಮಾತು ಎಷ್ಟು ಸತ್ಯ! ಮೂರ್ಖತನವಿಂದರೇನು? ಎಂದು ದಾಸರು ಹೇಳಿದ ಬಗೆ ಎಂತಹ ಮೂರ್ಖನಿಗಾ ದರೂ ತಿಳಿಯಬೇಕು.

ಒಂಟಿಯಲಿ ಹೆಂಡತಿಯ ಬಿಡುವಾತ ಮೂರ್ಖ-ಗಂಟನೊಬ್ಬರ ಕೈಲಿ ಇಡು ವಾತ ಮೂರ್ಖ। ನೆಂಟರಿಗೆ ಸಾಲವನು ಕೊಡುವಾತ ಮೂರ್ಖ.

ಸತ್ತ ಕರುವಿನ ಹಾಲು ಕುಡಿವಾತ ಮೂರ್ಖ-ಒತ್ತೆಯಿಲ್ಲದೆ ಸಾಲ ಕೊಡು ವಾತ ಮುಖರ್ಖ, ಹೆತ್ತ ತಾಯಿಯನು ಬೈವವ ಕಡು ಮೂರ್ಖ.

ಉಂಡ ಮನೆಗೆರಡ ಬಗೆವಾತ ಮೂರ್ಖ--ಕೊಂಡೆ ಮಾತನು (ಚಾಡಿಯ ಮಾತು) ಕೇಳಿ ಕುಣಿಯುವವ ಮೂರ್ಖ- ಈ ಒಂದೊಂದು ಮಾತಿನ ವ್ಯಾವಹಾರಿಕ ಸತ್ಯತೆ ಎಷ್ಟು ಸ್ಪಷ್ಟ!

ಹೇ ನಾಲಿಗೆ ನಿನ್ನನು ಬೇಡಿಕೊಳ್ಳುತ್ತೇಲೆ ಹರಿನಾಮ ಹೇಳು, ನಾಡಮಾತು ಬೇಡಾ, ಎಂದು ಬೇಡಿಕೊಳ್ಳುತಾರೆ, ಆಗಲು ನಾಲಿಗೆ ಹರಿನಾಮ ಹೇಳದಿದ್ದರೆ, ಏನು ನಾಲಗೆ ಹುಲ್ಲಿ ನೆಗ್ಗಿನ ಮುಳ್ಳು ಮುರಿದಿದೆಯೋ? ಎಂದು ಅಣಕಿಸುತ್ತಾರೆ.

ಉಪದೇಶ ಮಾಡಿ ಮಾಡಿ ಬೇಸತ್ತು "ಜೇವು ರೆಲ್ಲ ದೊ ಳಿ ಡ ಲೇ ನು ಫಲ– ಹಾಲಿಗೆ ಹಾಲೆರೆದು ಏನು ಫಲ" ಹೀಗೆಂದು ತನ್ನ ಉಪದೇಶಗಳೆಲ್ಲಾ ವ್ಯರ್ಥವಾಯ್ತೇ; ಎಂದು ಶಂಕಿಸುತ್ತಾರೆ.

ಪರರ ವನಿತೆಯರ ಒ ಲು ಮೆ ಗೆ ಒಲಿದು ಅವರನ್ನು ಬೆರೆದು ಆಮೇಲೆ ನೀರಿನಲ್ಲಿ ಮುಳುಗಿ ಬೆರಳನೆಣಿಸಿ ಜಪಮಾಡುವವರನ್ನು – ಪತಿ ಸೇವೆ ಬಿಟ್ಟು ಪರಪತಿಯರಲ್ಲಿ ಸರಸವಾಡಿ, ಬಳಿಕ ಮೈ ತೊಳೆದು ವ್ರತವನ್ನು ಮಾಡುವಳನ್ನು ಕಂಡು ದಾಸರು "ನಗೆ ಯುಬರುತಿದೆ" ಎಂಬ ಇಂತಹ ಢಾಂಬಿಕರನ್ನು, ನೀತಿಯಲ್ಲಿ ಹೊಲೆಯರನ್ನು ನಮ್ಮ ಮುಂದೆ ನಗೆಗೀಡಾಗಿಸುತ್ತಾರೆ.

ತನುವನ್ನ ನೀರೊಳದ್ದಿ ದರೇನು ಬಂತು? ಮನದಲ್ಲಿ ದೃಢ ಭಕ್ತಿ ಇರಬೇಕು ಎಂದು ಕುಂಠ ಆಚಾರವಂತರ ಗಂಟಲೊಕುವಂತೆ ಹೇಳುವರು.

ಹರಿ, ಹರಿ, ಎನ್ನಲು ಜೀವನದಲ್ಲಿ ಅವಕಾಶವೇ ದೊರಕುತ್ತಿಲ್ಲವೇ ನಿಮಗೆ? ನರಜನ್ಮ ವ್ಯರ್ಥವಾಗಿ ಹೋಗುತ್ತಿದೆಯಲ್ಲಾ!

ಹರಿ ಜಾಗರಣೆ ಏ ಕಾ ದ ಶಿ ಗ ಳ ಲ್ಲಿ ನಿನಗೆ ದ್ವಾದಶಿ ಪಾರಣೆಯ ಚಿಂದೆ—ಯಾತ್ರೆಗೆ ಹೋದಾಗ ಪಾರಣೆ. ಚಿಂತೆ' ಸತ್ಕಾರ್ಯ ಮಾಡುವಾಗ ಧನದ ಮೇಲಿನ ಚಿಂತೆ' ಪ್ರಣ್ಯಕಥೆ ಶ್ರವಣ ಮಾಡುವಾಗ ಗೃಹದ ಚಿಂತೆ' ಕಾಶಿಯಾತ್ರೆಗೆ ಹೋಗಿ ಅಲ್ಲಿಯೂ ನಿಶ್ಚಿಂತೆಯಿಂದ ನೀನು ಗಂಗೆ ಮುಳುಗಲಾರೆ.

"ಗಂಗೆ ಮುಳುಗುವಾಗ....ಚೆಂಬು ಮೇ ಲಿ ದ್ದ ಚಿಂತೆ....ಸಂಗಡದವರು ಹೋಗುವ ಚಿಂತೆ"

ಪನ್ನಗಶಯನ ಶ್ರೀ ಪುರಂದರವಿಠಲನ್ನ ಹಿಂಗದೆ ಭಜಿಸಲು ಸತತ ನಿಶ್ಚಿಂತೆ. ಈ ಕೀರ್ತನೆಯಲ್ಲಿ ದಾಸರು ಸಾಧಕನು ತನ್ನ ದೌರ್ಬಲ್ಯವನ್ನು ಅರಿತುಕೊಂಡು ಸಾಧನೆ ಯಲ್ಲಿ ಮುಂದುವರಿಯಲಿ ಎರಬ ಆಶಯ ವ್ಯಕ್ತ ಮಾಡುವುದನ್ನು ಕಾಣಬಹುದು.

ಪುರಂದರದಾಸರ ಕೆಲವು ಕೀರ್ತನೆಗಳಲ್ಲಿ ಸಾಹಿತ್ಯದಲ್ಲಿ ಸೇರಿಸಲಾಗದಂಥ ಪೆ. ಎಷ್ಟು ಹೇಳಿದರೂ ನಿನಗೆ ಮತಿ ತಿಳಿಯದು ಥೂ ....ಲವಡಿ! ಛಿ!

ಹೋಡಿ ಪಾಪಿ ಮನವೆ! ಮುಂಡೆರಾದರು ಪಂಡಿತರು. ತುಂಡು ಮುಂಡೆ....
ೃದಿ. ತುಡುಗು ಮುಂಡೆಗಂಡ. ಧಗಡಿ ಬಡ್ಡಿಮಕ್ಕಳು. ವಾಸುದೇವನ ಪೂಜೆ
ಡೆಂದರೆ ನಿನಗೆ ಬೇಸರಿಕೆ ತಲೆ ಚಿಟ್ಟೆಕ್ಕುತ್ತದೆ. ಪಗಡೆ, ಚದುರಂಗ, ಕವಡೆ ಈ
ಗಳನ್ನಾಡಿ ವೇಳೆ ಕಳೆಯುವೆ, ಅದೇ ಹರಿ ಜಾಗರಣೆಗೆ ಕರೆದರೆ ಅಯ್ಯೋ! ಯಾರು
ಗೆಡಲಪ್ಪಾ! ಎಂದು ಆಕಾಶ ಧರೆಗೆ ಹರಿದು ಬಿತ್ತೋ ಎಂಬಂತ ಕೊರಗುತ್ತಿ! ನನ್ನ
ತು ಕೇಳು, ಕೋತಿಯ ಹಾಗೆ ಕುಣಿದಾಡಬೇಡಾ, ರೀತಿ ಮಾರ್ಗ ಹಿಡಿ ಮೂಢ
ೂರ ಹಂದಿ ಹೇಸಿಕೆಯಲ್ಲಿ ಹೊರಳಿದಂತೆ ಎಷ್ಟು ಜನ್ಮದಲ್ಲಿ ಹೊರಳಿ ಬಂದೆ!
ಡಿರು ಮಕ್ಕಳೆಂಬ ಪ್ರಪಂಚಕ್ಕೆ ದುಡಿದು ದುಡಿದು ಮುದಿ ಕೋಣನಾಗಿ ಹೋದೆ
ಲ್ಲೋ! ಜನರ ಮುಂದೆ ಬಿಡಿಸೂಳೆಯಂತೆ ತಿರುಗುವ ನಿನಗೆ ಪುರಂದರ ವಿಠಲನಿಗೆ
ು ಹೋಗಲು ಸಾಧ್ಯನಿಲ್ಲವೆ; ಎಂದು ಚುಚ್ಚಿ ಮಾತನಾಡಿ, ಎಲೈ ಸಾಧಕನೇ!
ಭಕ ಭಕ್ತ ಬೇಡಾ, ಡೊಂಬ ಲಾಗ ಹಾಕಿ ಡೊಂಡೊಂಡೆ ಹೊರಳಿದರೂ ಕೃಷ್ಣ
ಕ್ಕನು, ಕಿಚ್ಚಿ. ಕೈ ಶುದ್ಧವಿಲ್ಲದೇ ಕರ್ಮವಿಲ್ಲಾ! ಇದನ್ನು ತಿಳಿ, ನೀನು ಎಷ್ಟು
ಟ್ಟರೂ ನಿನಗೆ ದೊರಕದು. ದಾನ ಮಾಡು ಹರಿಗರ್ಪಿಸು- "ತಾನೇ ಕೊಡ
ಕ ಕೊಸರಿಕೊಂಡರು ಇಲ್ಲಾ" ಪುರಂದರ ವಿಠಲನ್ನ ದೂರಿದರೂ ನಿನಗೇನೂ
ು° ನಿನಗೆ ಈಗ ದಾರಿದ್ರ್ಯ ಬಂದುದು ಹಿಂದೆ ದಾನ ಮಾಡದೇ ಇರುವುದರಿಂದ
ು ತಿಳಿ. ತನ್ನ ಬಡತನಕ್ಕಾಗಿ ಶ್ರೀಮಂತರನ್ನು ದ್ವೇಷಿಸುವ ಬುದ್ಧಿ ಇರಬಾರದು
ು ಬಡವನಿಗೂ, ನೀನು ಈ ಬಡವನಿಗೆ ದಾನ ಮಾಡದಿದ್ದರೆ ನಿನಗೂ ಮುಂದೆ
ಹ ಗತಿಯೇ ಬಂದೀತು ಎಂದು ಶ್ರೀಮಂತಗೂ ಉಪದೇಶ ಮಾಡುತ್ತಾರೆ
ರು.

ಗಾಳದ ತುದಿಗೆ ಸಿಕ್ಕಿಸಿದ ಮಾಂಸದ ಆಸೆಯಿಂದ ಸಿಕ್ಕಿಸಾಯುವ ಮೀನಿನಂತಾ
ಡಾ. ಬೆಂಕಿಗೆ ಬೀಳುವ ಪತಂಗದಂತಾಗಬೇಡಾ, ಗುಹ್ಯ ಇಂದ್ರಿಯ ಚಾಪ
ಸಿಲುಕಿ ಹೊಂಡಕ್ಕೆ ಬೀಳುವ ಆನೆಯಂತಾಗಬೇಡಾ, ತಂತೀವಾದ್ಯದ ಧ್ವನಿಗೆ
ೊಟ್ಟು ಬೇಡನ ಬಲೆಗೆ ಬಿದ್ದು ಸಾಯುವ ಹರಿಣದಂತೆ ಆಗಬೇಡಾ. ನಾರಿಲಂಪಟ
ಸಂಪಿಗೆ ಹೂವಿನ ಪರಿಮಳಕ್ಕೆರಗಿ ಹೊರಳಿ ಅಳಿಯುವ ಅಳಿಯಂತಾಗಬೇಡಾ,
ು ಈ ಕೀರ್ತನೆಯಲ್ಲಿ ಕ್ರಮವಾಗಿ....

ನಾಲಿಗೆ (ಮೀನು, ಗಾಳ) ಕಣ್ಣು (ಪತಂಗ ಮತ್ತು ಬೆಂಕಿ, ಕಿವಿ (ತಂತೀ
ದ್ಯ- ಮತ್ತು ಹರಿಣ) ಸ್ಪರ್ಶೇಂದ್ರಿಯ. (ಆನೆ ಮತ್ತು ಸ್ಪರ್ಶ) ಮೂಗು....
ಂಬಿ ಮತ್ತು ಸಂಪಗಿ) ಪಂಚ ಜ್ಞಾನೇಂದ್ರಿಯಗಳನ್ನು ಉದಾಹರಿಸಿ ಒಂದೊಂದು
ದ್ರಿಯಗಳ ವಶವಾಗಿ ಕ್ರಿಮಿಕೀಟ ಹಾಗೆಯೇ ಆನೆಯೇ ಮೊದಲಾದ ಪ್ರಾಣಿಗಳು
ುವುವು ಎಂದ ಮೇಲೆ ಐದು ಇಂದ್ರಿಯಗಳಲ್ಲಿ ಸಿಲುಕಿದ ಮಾನವನ ಗತಿ ಏನಾ

ಹೀತು! ಎಂದು ಎಚ್ಚರಿಸಿ, ಜೇ ಪುರಂದರವಿಠಲ ದಯದಿಂದ ಈ ಭವ ದೂರವ
ಎಂದು ದೇಗರನ್ನು ಮರೆಹೋಗುವ ಅವಶ್ಯಕತೆಯನ್ನು ಒತ್ತಿ ಹೇಳುತ್ತಾರೆ.

ಶ್ರೀ ಪುರಂದರದಾಸರು ಕೇವಲ ಸಂಸಾರಿಗಳಿಗೆ, ಅಜ್ಞರಿಗೆ ಮಾತ್ರ ಉಪ
ಮಾಡಿದರೆಂದಲ್ಲಾ. ದಾರಿ ತಪ್ಪಿದ, ಸನ್ಯಾಸಿ, ಯೋಗಿ, ಜಂಗಮ ಬೈರಾಗಿ ಯ
ಆಗಿರಲಿ ದಾಸಾರ್ಯರ ಕಣ್ಣು ಅತ ತಪ್ಪಿಸಿಕೊಳ್ಳುವಂತಿಲ್ಲಾ.

ಎಲ್ಲಾನು ಬಲ್ಲೆನೆಂಬುವರಲ್ಲಾ ಅವಗುಣ ಬಿಡಲಿಲ್ಲಾ ।
ಸೊಲ್ಲಿಗೆ ಶರಣರ ವಚನವ ಪೇಳುತ ಸಲ್ಲದ ಕಾರ್ಯವ ಮಾಡುವಿರಲ್ಲಾ ॥
........ಕಾವಿಯನುಟ್ಟು ತಿರುಗುವಿರಲ್ಲಾ.... ಕಾಮನ ಬಿಡಲಿಲ್ಲಾ........

ಬ್ರಹ್ಮಜ್ಞಾನಿಗಳೆನಿಸುವಿರಲ್ಲಾ........ಹಮ್ಮನು
ಬಿಡಲಿಲ್ಲಾ........ತಾವೊಂದರಿಯದೆ ಆಗಮ ತಿಳಿಯದೆ ಶ್ವಾನನ ಕುಳಿಯಲಿ
ಬೀಳುವಿರಲ್ಲಾ........

''ಮಂಡೆ ಜೋಳಾದರೆ ಮನ ಜೋಳಾಯ್ತೆ'' ಎನ್ನುವ ಅವರ ಮಾತಿನ ಚ
ಮಾರ್ಗ ತಪ್ಪಿದವರನ್ನು ಸರಿದಾರಿಗೆ ತರುತ್ತದೆ.

ಗೀತೆಯಲ್ಲಿ....ಯೋಗಿಯ ಲಕ್ಷಣವನ್ನು ''ಸಮಲೋಷ್ಟಾಷ್ಮ ಕಾಂಚನ
ಎಂದು ಹೇಳಿದೆ. ಅದನ್ನ ದಾಸರು....

ಒಂಟಿಯಲಿ ಮುನಿಗಳ ಆಶ್ರಮದಲಿ ನೆಲಸಬೇಕು-ಹೆಂಟೆ ಬಂಗಾರ ಸಮ ತಿ
ಯಬೇಕು" ಎಂದು ವಿವರಿಸಿರುವರು. ತಮ್ಮ ಸಮಕಾಲೀನ ಸಮಾಜದಲ್ಲಿ ಬಳಸ
ಗಾದೆಯ ಮಾತು, ಜಾಣ್ನುಡಿಗಳನ್ನು ದಾಸರು ಹೇರಳವಾಗಿ ಉಪಯೋಗಿಸಿರುವ

1) ಡೊಂಬ ಲಾಗವ ಹಾಕಿದರೂ ಇಲ್ಲಾ....ಅಂದರೆ ಎಷ್ಟೇ ಪ್ರಯತ್ನ ಮಾ
ಡರೂ ಇಲ್ಲಾ ಎಂಬರ್ಥದಲ್ಲಿ ಈಗಲೂ ಬಳಸುತ್ತಾರೆ.

2) ಕಚ್ಚೆ ಕೈ ಶುದ್ಧವಿಲ್ಲ....ಇಂದ್ರಿಯನಿಗ್ರಹವಿಲ್ಲದವ. ಕೊಟ್ಟು ಕೊಳ್ಳು
ವ್ಯವಹಾರ ಚೆನ್ನಾಗಿ ಇಲ್ಲದವನು.

3) ನೀರ ಮೇಲಿನ ಗುಳ್ಳೆ....ನಶ್ವರ ಎಂಬರ್ಥದಲ್ಲಿ.

4) ಮಧ್ಯಾಹ್ನ ದರಿದ್ರ... ಎಂದರೆ ಒಪ್ಪತ್ತಿನ ಊಟಕ್ಕೂ ಇಲ್ಲದವ.

5) ಹರಟೆಗಾಗಿ ಹರಸಿಕೊಂಡ—ಅಂದರೆ ಸುಮ್ಮಸುಮ್ಮನೆ ದೇವರಿಗೆ ಹ
ಹೇಳಿಕೊಳ್ಳುವುದು.

6) ಗಂಗೆ ಮುಳುಗುವಾಗ ಚೆಂಬು ಮೇಲಿದ್ದ ಚಿಂತೆ....ಸಾಧನೆಯಲ್ಲಿ ಏಕಾಗ್ರತೆ ಇಲ್ಲಾ ಎಂದರ್ಥ.

7) ಚರ್ಮ ತೊಳೆದರೆ ಕರ್ಮ ಹೋದೀತೆ ?

8) ಮಂಡೆ ಬೋಳಾದರೆ ಮನ ಬೋಳಾಯ್ತೆ ?

9) ಕಲ್ಲ ಗೋವಿನ ಹಾಲು ಕರು ಬಯಸಿದಂತೆ !

10) ಅಡಿಕೆ ಹೋಳಿಗೆ (ತುಂಡಿಗೆ) ಹೋದ ಮಾನ ಆನೆ ಕೊಟ್ಟರೂ ಬಾರದೊ.

11) ಹಾಸಿಗೆ ಅರಿತು ಕಾಲು ನೀಡಬೇಕು.

12) ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು–ಸಾಧನೆಯ ನಿಷ್ಫಲತೆ.

13) ಹಗೆಯವರ ಮನೆಯಲ್ಲಿ ಹಗರಣವಾದರೇನು ?

14) ಬೆಂಡು ಮುಳುಗಿದರೇನು? ಗುಂಡು ತೇಲಿದರೇನು? ಅಸಾಧ್ಯ ಎಂದರ್ಥ.

15) ಮುಂದಲೆ ಕೊಯ್ದು ಮುಡಿಗೆ ಹೂ ಮುಡಿಸಿದಂತೆ–ದುಷ್ಟರು ಮಾಡುವ ಉಪಚಾರ.

16) ಮಂಗನ ಕೈಯ್ಯ ಮಾಣಿಕ್ಯ—ವ್ಯರ್ಥವೆಂದರ್ಥ.

17) ಆಟ್ಟ ಮೇಲೆ ಒಲೆ ಉರಿಯಿತು—ಕೆಟ್ಟ ಮೇಲೆ ಬುದ್ಧಿ ಬಂದಿತು.

18) ತುದಿ ನಾಲಗೆ ಬೆಲ್ಲ—ಎದೆ ಕತ್ತರಿಯವರ ಸಂಗ ಬೇಡಾ.

19) ಗರುಡ ಮಂತ್ರ ಜಪಿಸಿದರೆ ಗರಳ ಭಯವಿಲ್ಲಾ.

20) ಬೇಲಿಯೇ ಹೊಲವನ್ನ ಮೆದ್ದರೆ.

21) ಮೂಗು ಸಣ್ಣದು ಮೂಗುತಿ ದೊಡ್ಡದು.

22) ಮಾರಿಹೋದ ಮಾತಿಗೆ ನೀರೇ ಬಿಡಬೇಕು.

23) ಕೂಡಿದ್ದವರು ಆಡಿಕೊಂಡರೆ ಕೇರಿಯೇಬಿಡಬೇಕು.

ಇಂತಹ ಸಾವಿರಾರು ನುಡಿಗಳಿಂದ ವಿಪುಲ ಸಾಹಿತ್ಯರಚಿಸಿ. ತನ್ನ ಉಪದೇಶದಿಂದ ಆ ಕಾಲದ ಸಮಾಜಕ್ಕೆ ತುಂಬ ಉಪಕಾರ ಮಾಡಿರುವರು. ಅವರ ಆ ಉಪದೇಶ ಇಂದಿಗೂ ಅಷ್ಟೇ ಚಿರಸತ್ಯ; ಅವರ ಸಾಹಿತ್ಯ ಅಧ್ಯಯನದಿಂದಲೇ ಅರಿಯಬೇಕಾದ ಅಂಶ. ಬರೆದರೆ ಪೂರ್ಣವಾಗದು.

**ಕೃಪೆ ದಾಸವಾಣಿ**

# ಗ್ರಾಮೀಣ ಬದುಕಿನಲ್ಲಿ ಗೃಹ ಹಾಗೂ ಸಣ್ಣ ಕೈಗಾರಿಕೆಗಳ ಪಾತ್ರ

—ಡಿ. ವೆಂಕಟರಾವ್, ಎಂ.ಎ., ಹಾಸನ.

ದೇಶದಲ್ಲಿ ಕೈಗಾರಿಕಾ ಪ್ರಗತಿ ತ್ವರಿತಗತಿಯಲ್ಲಿ ಸಾಗುವಂತಾಗಿ ಬಂಡವಾಳ ಹೂಡಿಕೆ ಮತ್ತು ಉದ್ಯೋಗಾವಕಾಶಗಳು ಹೆಚ್ಚಬೇಕು ಎಂಬುದು ಸರಕಾರದ ಆಶಯ. ಇದರ ಈಡೇರಿಕೆಗೆ ಅದು ಸುಲಭ ಮಾರ್ಗವನ್ನು ಕಂಡುಕೊಂಡಿದೆ. ಬಂಡವಾಳದ ಕೊರತೆ ಇರುವ ಭಾರತದಲ್ಲಿ ದೊಡ್ಡದಾದ ಉದ್ಯಮ ಸಾಹಸವನ್ನು ಬೆಳೆಸುವ ಪ್ರಯತ್ನಕ್ಕಿಂತಲೂ ಸಣ್ಣ ಉದ್ಯಮಿಗಳಿಗೆ, ಕುಶಲ ಕೆಲಸಗಾರರಿಗೆ, ಸ್ವಂತ ಉದ್ಯೋಗಿಗಳಿಗೆ ಹೆಚ್ಚಿನ ಉತ್ತೇಜನ ಕೊಡುವುದರಿಂದ ಪ್ರತಿಫಲ ಶೀಘ್ರವಾಗಿ ದೊರೆಯುವುದಲ್ಲದೆ ಆರ್ಥಿಕ ಸ್ವಾವಲಂಬನೆಯನ್ನೂ ಸಾಧಿಸಬಹುದು ಎಂಬ ಭಾವನೆಯಿಂದ ಸರಕಾರ ಗೃಹ ಹಾಗೂ ಸಣ್ಣ ಕೈಗಾರಿಕಾ ಕ್ಷೇತ್ರಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡುವ ನೀತಿಯನ್ನು ಹೊಂದಿದೆ. ಭಾರತ ಮುಖ್ಯವಾಗಿ ಗ್ರಾಮಗಳ ದೇಶವಾಗಿದ್ದು, ಗ್ರಾಮೀಣ ಅಭಿವೃದ್ಧಿಯಾಗದ ಹೊರತು ಅದರ ಅಭಿವೃದ್ಧಿ ಸಾಧ್ಯವಿಲ್ಲವಾಗಿದೆ. ಗ್ರಾಮೀಣ ಅಭಿವೃದ್ಧಿ ಗೃಹ ಹಾಗೂ ಸಣ್ಣ ಕೈಗಾರಿಕೆಗಳ ಬೆಳವಣಿಗೆಯ ಮೇಲೆ ನಿಂತಿದೆ. ಈ ದೃಷ್ಟಿಯಿಂದ ಸರಕಾರದ ನೀತಿಯು ಸ್ತುತ್ಯಾರ್ಹವಾಗಿದೆ. ಈ ನೀತಿಯು ಸ್ಥೂಲವಾಗಿ ಸಮಾಜವಾದದ ನೀತಿಯಾಗಿದ್ದು, ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಯನ್ನೇ ಮುಖ್ಯ ಗುರಿಯಾಗಿ ಹೊಂದಿದೆ. ಕೃಷಿ ಕ್ಷೇತ್ರದಲ್ಲಿ ಹೆಚ್ಚಿನ ಉದ್ಯೋಗಾವಕಾಶ ಹಾಗೂ ಸಂಪ್ರದಾಯ ಗೃಹ ಕೈಗಾರಿಕೆಗಳ ಪುನರುಜ್ಜೀವನ ಮತ್ತು ವಿಸ್ತರಣದಿಂದ ಗ್ರಾಮಾಂತರ ಜನರ ಉದ್ಯೋಗಾವಕಾಶ ಹೆಚ್ಚಿಸಿ, ಪಟ್ಟಣಗಳಿಗೆ ಅದರ ವಲಸೆಯನ್ನು ತಡೆಗಟ್ಟುವುದು ಈ ನೀತಿಯ ಹಂಚಿಕೆ. ಭಾರತದ ಆರ್ಥಿಕ ಭವ್ಯಭವಿಷ್ಯ ಇಂತಹ ಆರ್ಥಿಕ ನೀತಿಯನ್ನೇ ಅವಲಂಬಿಸಿದೆ.

ಅಭಿವೃದ್ಧಿಶೀಲ ರಾಷ್ಟ್ರವಾದ ಭಾರತದಲ್ಲಿ ಕೆಲವು ವಿಶಿಷ್ಟ ಲಕ್ಷಣಗಳು ಮನೆ ಮಾಡಿವೆ. ಅವೆಂದರೆ ಹೇರಳ ಮಾನವಶಕ್ತಿ, ಬಂಡವಾಳದ ಅಭಾವ, ಚಿಕ್ಕ ಮಾರು ಕಟ್ಟೆಗಳು, ಅಪರಿಣಿತ ಕೆಲಸಗಾರರು, ತಾಂತ್ರಿಕ ಜ್ಞಾನದ ಕೊರತೆ, ಉದ್ದಿಮೆದಾರರ ಸಾಹಸಹೀನ ಪ್ರವೃತ್ತಿ ಇತ್ಯಾದಿ. ಈ ಲಕ್ಷಣಗಳಿಂದಾಗಿ ಭಾರತದಲ್ಲಿ ಬೃಹತ್ ಉದ್ದಿಮೆಗಳ ಸ್ಥಾಪನೆ ಸುಲಭವೂ ಅಲ್ಲ, ಲಾಭದಾಯಕವೂ ಅಲ್ಲ. ಆದ್ದರಿಂದ ನಮ್ಮ ದೇಶದ ಔದ್ಯಮೀಕರಣಕ್ಕೆ ಏಕೈಕ ಹಾಗೂ ಸುಲಭ ಮಾರ್ಗವೆಂದರೆ ಗೃಹ

…ಗೂ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿ ಅಭಿವೃದ್ಧಿಗೊಳಿಸುವುದು ಈ ಕಾರಣದಿಂದಾ…ಗಿಯೇ ನಮ್ಮ ಅರ್ಥ ವ್ಯವಸ್ಥೆಯಲ್ಲಿ ಯೋಜನೆಯಿಂದ ಯೋಜನೆಗೆ ಇವುಗಳಿಗೆ ಪ್ರಾಧಾ…ನ್ಯತೆ ಹೆಚ್ಚುತ್ತಾ ನಡೆದಿದೆ. ಯೋಜನೆಗಳಲ್ಲಿ ಈ ಕೈಗಾರಿಕೆಗಳನ್ನು ಗ್ರಾಮಾಭಿವೃದ್ಧಿ …ಕಾರ್ಯಕ್ರಮದ ಮುಖ್ಯ ಲಕ್ಷಣವಾಗಿ ಅಭಿವೃದ್ಧಿಗೊಳಿಸಲಾಗುತ್ತಿದೆ.

**ಆರ್ಥಿಕ ಉದ್ಯೋಗಾವಕಾಶಗಳು :** ಭಾರತದಲ್ಲಿ ಗ್ರಾಮೀಣ ಪ್ರದೇಶಗಳ …ಬಡತನ ನುಂಗಲಾರದ ತುತ್ತಾಗಿದೆ. ಈ ಪ್ರದೇಶಗಳಲ್ಲಿ ಜನಸಂಖ್ಯೆ ನಾಗಾಲೋಟ…ದಿಂದ ಏರುತ್ತಿದ್ದು, ಶೇಕಡ 60ರಷ್ಟು ಜನರ ಉಪಭೋಗದ ಪ್ರಮಾಣ ರಾಷ್ಟ್ರೀಯ …ಸರಾಸರಿಗಿಂತಲೂ ಕಡಿಮೆ ಇರುತ್ತದೆ ಎಂದು ತಿಳಿದುಬಂದಿದೆ. ಈ ಪ್ರದೇಶಗಳಲ್ಲಿನ …ಜನರ ಬಡತನವನ್ನು ನಿರ್ಮೂಲಮಾಡಿ ಅವರ ಜೀವನಮಟ್ಟವನ್ನು ಮೇಲೆತ್ತುವಲ್ಲಿ …ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಪರಿಣಾಮಕಾರಿ ಸಾಧನಗಳಾಗಿವೆ. ಗ್ರಾಮಾಂತರ …ಪ್ರದೇಶಗಳಲ್ಲಿನ ಜನ ಮುಖ್ಯವಾಗಿ ಹೊಲಗದ್ದೆಗಳನ್ನೇ ನೆಚ್ಚಿಕೊಂಡಿರುವರು. ಆದರೆ …ಕೇವಲ ಹೊಲಗದ್ದೆಗಳು ಇವರನ್ನು ಪೋಷಿಸಲಾರವು. ಇವರಲ್ಲಿ ಹೆಚ್ಚುಮಂದಿಗೆ …ವರ್ಷದಲ್ಲಿ ಕೆಲವೇ ತಿಂಗಳ ಕೆಲಸ. ಅನೇಕ ತಿಂಗಳ ನಿರುದ್ಯೋಗ, ಇಂತಹವರಿಗೆ …ಕೆಲಸವಿಲ್ಲದ ಕಾಲದಲ್ಲಿ ಏನಾದರೂ ಉಪವೃತ್ತಿಯನ್ನು ಒದಗಿಸಬೇಕು. ಅಂದರೆ ಇಡೀ …ವರ್ಷ ಕೆಲಸ ದೊರಕುವಂತೆ ಮಾಡಬೇಕು. ಇದಕ್ಕೆ ಗೃಹ ಕೈಗಾರಿಕೆಗಳು ಸಾರ್ವ…ಭೌಮ ಔಷಧಿಗಳಾಗಿವೆ. ಹೀಗೆ ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಎರಡು ಬಗೆ…ಯಲ್ಲಿ ಉದ್ಯೋಗಾವಕಾಶಗಳನ್ನು ಒದಗಿಸಿಕೊಡುತ್ತವೆ. ಮೊದಲನೆಯದಾಗಿ …ಪೂರ್ಣಾವಧಿಯ ಉದ್ಯೋಗವನ್ನು ಕಲ್ಪಿಸಿಕೊಡುವುದರ ಮೂಲಕ ಗ್ರಾಮೀಣ ನಿರು…ದ್ಯೋಗ ಸಮಸ್ಯೆಯನ್ನು ನಿವಾರಿಸುತ್ತದೆ. ಎರಡನೆಯದಾಗಿ, ಗ್ರಾಮೀಣ ಪ್ರದೇಶದ …ರೈತರು ಬಿಡುವಿನ ವೇಳೆಯಲ್ಲಿ ಈ ಕೈಗಾರಿಕೆಗಳಲ್ಲಿ ಕೆಲಸಮಾಡಿ ತಮ್ಮ ತಲಾ ವರ…ಮಾನವನ್ನು ಹೆಚ್ಚಿಸಿಕೊಂಡು ರಾಷ್ಟ್ರದ ಉತ್ಪಾದನೆಯನ್ನು ಆರ್ಥಿಕಗೊಳಿಸಬಹುದು. …ಇದರಿಂದ ಋತುಮಾನದ ನಿರುದ್ಯೋಗವನ್ನು ಪರಿಹರಿಸುವುದರ ಜೊತೆಗೆ ಅನಿಶ್ಚಿತ …ಪ್ರವೃತ್ತಿಯಾದ ಕೃಷಿಯ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಬಹುದು. …ಈ ಕೈಗಾರಿಕೆಗಳು ಸ್ವತಃ ಉದ್ಯೋಗ ಕಲ್ಪಿಸಿಕೊಡುವ ಮೂಲಕ ವ್ಯಕ್ತಿಗೆ ಸ್ವಾವ…ಲಂಬನೆಯ ಪಾಠವನ್ನು ಕಲ್ಪಿಸಿಕೊಡುತ್ತವೆ. ನಿರುದ್ಯೋಗ ಬದುಕಿನ ದುರ್ಭರತೆ…ಯಲ್ಲಿ ಆಶಾಕಿರಣವನ್ನು ಬೆಳಗಿಸುತ್ತವೆ.

ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಮುಖ್ಯವಾಗಿರಲು ಮತ್ತೊಂದು ಕಾರಣ…. ನಮ್ಮ ದೇಶದಲ್ಲಿ ಸಾಕಷ್ಟು—ಅಸಿದ್ಧ ವಸ್ತುಗಳಿವೆ. ಹೇರಳ ಮಾನವ ಶಕ್ತಿ…, ಆದರೆ ಬಂಡವಾಳದ ಕೊರತೆ ಅಷ್ಟೇ ತೀವ್ರವಾಗಿದೆ. ದೊಡ್ಡ ಕೈಗಾರಿಕೆಗಳಿಗೆ …ಚ್ಚ ಬಂಡವಾಳ ಹಾಕಿದರೂ ಅವು ಹೆಚ್ಚು ಕೆಲಸಗಾರರನ್ನು ನೇಮಿಸಲಾರವು.

ಆದ್ದರಿಂದ ಭಾರತದ ಆರ್ಥಿಕ ನೀತಿಗೆ ಹೊಂದುವ, ಕಡಿಮೆ ಬಂಡವಾಳದಿಂದ ಹೆಚ್ಚು ಕೆಲಸಗಾರರಿಗೆ ಕೆಲಸ ದೊರಕಿಸಬಲ್ಲ ಗೃಹ ಹಾಗೂ ಸಣ್ಣ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸಬೇಕು. ಈ ಅಭಿವೃದ್ಧಿಯು ಅಧಿಕ ಜನರಿಗೆ ಕೆಲಸ ಹಾಗೂ ಸಂಪಾದನೆ ದಾರಿದೀಪವಾಗುತ್ತದೆ. ಬಂಡವಾಳದ ಕೊರತೆ ಮತ್ತು ಜನಸಂಖ್ಯೆಯ ಹೆಚ್ಚಳಗ ನಡುವೆ ಸಮತೆಯನ್ನು ಕಂಡು ಪೂರ್ಣ ಉದ್ಯೋಗವನ್ನು ತಲುಪಲು ಇರುವ ಏ ಮೇವ ಔಷಧಿಯೆಂದರೆ ಈ ಕೈಗಾರಿಕೆಗಳ ಬೆಳವಣಿಗೆ.

ಗೃಹ ಹಾಗೂ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಹೆಚ್ಚಿನ ಜಾಣ್ಮೆಯ ಅಥವ ನೈಪುಣ್ಯತೆಯ ಅಗತ್ಯವಿಲ್ಲ. ಸ್ಥಳೀಯ ಸಾಮಾನ್ಯ ಬುದ್ಧಿಶಕ್ತಿಯಿಂದಲೇ ಇವುಗಳನ ಸ್ಥಾಪಿಸಬಹುದು. ಇವು ಸ್ಥಳೀಯವಾಗಿ ದೊರೆಯುವ ಕಚ್ಚಾ ಪದಾರ್ಥಗಳ ಹೊಂದಿಕೊಂಡು, ಸಾರಿಗೆಯ ವೆಚ್ಚದಲ್ಲಿ ಉಳಿತಾಯ ಮಾಡುತ್ತವೆ. ಅಲ್ಲಿ ಕಾರ್ಮಿಕರಿಗೆ ಅವರು ವಾಸಿಸುವ ಊರುಗಳಲ್ಲೇ ಲಾಭದಾಯಕ ಉದ್ಯೋಗಗಳನ ಒದಗಿಸುತ್ತವೆ. ಅಂದರೆ ಈ ಕೈಗಾರಿಕೆಗಳು ಒಂದು ಪ್ರದೇಶದಿಂದ ಮತ್ತೊಂ ಪ್ರದೇಶಕ್ಕೆ ಚಲಿಸಲು ಇರುವ ತೊಂದರೆಗಳನ್ನು ನಿವಾರಿಸುತ್ತವೆ. ಈ ಕೈಗಾ ಗಳನ್ನು ದೇಶದ ಎಲ್ಲೆಡೆಗಳಲ್ಲೂ ಸ್ಥಾಪಿಸುವುದರಿಂದ ಜನರು ಒಂದೆಡೆಯಿಂ ಮತ್ತೊಂದೆಡೆಗೆ ಚಲಿಸುವ ಪ್ರಶ್ನೆಯೇ ಏಳುವುದಿಲ್ಲ. ದೊಡ್ಡ ಕೈಗಾರಿಕೆಗಳಂತೆ ಇ ಕೊಳಕು ಪ್ರದೇಶಗಳನ್ನು, ರೋಗರುಜಿನಗಳನ್ನು, ಅನಾರೋಗ್ಯಕರ ವಾತಾವರ ವನ್ನು ಸೃಷ್ಟಿಸುವುದಿಲ್ಲ. ಈ ಕೈಗಾರಿಕೆಗಳು ಆರ್ಥಿಕ ಶಕ್ತಿಯ ಕೇಂದ್ರೀಕರಣವ ತಪ್ಪಿಸಿ ಪ್ರಾದೇಶಿಕ ಹಾಗೂ ಔದ್ಯಮಿಕ ಸಮಾನತೆ ಸಾಧಿಸುತ್ತವೆ. ನಮ್ಮ ಗ ಯಾದ ಸಾಮಾಜಿಕ ನ್ಯಾಯದ ಕಡೆಗೆ ಕೊಂಡೊಯ್ಯುತ್ತವೆ. ಗೃಹ ಹಾಗೂ ಸ ಕೈಗಾರಿಕೆಗಳು ಸ್ವಾವಲಂಬನೆಯ ಮೆಟ್ಟಿಲನ್ನು ಏರಲು ಉತ್ತಮ ಸಾಧನಗಳಾ ಸಾಧಾರಣವಾಗಿ ಉತ್ಪಾದಿಸುವುದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಇವು ಸಿದ್ಧ ಗಳನ್ನು ಉತ್ಪಾದಿಸುತ್ತವೆ. ಈ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದ ನಿತ್ಯೋಪಯೋಗಿ ವಸ್ತುಗಳ ಉತ್ಪಾದನೆ ವೃದ್ಧಿಯಾಗಿ ರಾಷ್ಟ್ರ ಸ್ವಾವಲಂಬನೆಯ ಮುಟ್ಟಲು ಸಾಧ್ಯವಾಗುತ್ತದೆ. ರಾಷ್ಟ್ರೀಯ ವರಮಾನ ಹಾಗೂ ತಲಾವರಮಾನಗ ಏರಿ ಜನತೆಯ ಜೀವನಮಟ್ಟವೂ ಉತ್ತಮಗೊಳ್ಳುತ್ತದೆ.

**ಬೃಹತ್ ಕೈಗಾರಿಕೆಗಳಿಗೆ ನೆರವು :** ಸಣ್ಣ ಕೈಗಾರಿಕೆಗಳನ್ನು ಬೃ ಕೈಗಾರಿಕೆಗಳೊಂದಿಗೆ ಅಳವಡಿಸುವುದು ಇತ್ತೀಚಿನ ಭಾರತದ ಧೋರಣೆಯಾ ಇಂದು ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಕೃಷಿ ಮತ್ತು ಬೃಹತ್ ಕೈಗಾರಿಕೆ ಸಂಬಂಧ ಕಲ್ಪಿಸುವ ಕೊಂಡಿಯಾಗಿ ಪರಿಣಮಿಸಿವೆ. ಸಣ್ಣ ಕೈಗಾರಿಕೆಗ ಬೃಹತ್ ಕೈಗಾರಿಕೆಗಳು ಕೆಲಸ ನಿರ್ವಹಿಸಲಾರವು. ಬೃಹತ್ ಕೈಗಾರಿಕೆಗಳು ಅ ವಸ್ತುಗಳಿಗೆ ಸಣ್ಣ ಕೈಗಾರಿಕೆಗಳನ್ನು ಅವಲಂಬಿಸಬೇಕಾಗಿರುವುದರಿಂದ, ಸಣ್ಣ

ಸಿದ್ಧಗ

ರಿಕೆಗಳು ಉತ್ಪಾದಿಸಿದ ವಸ್ತುಗಳಿಗೆ ಶಾಶ್ವತ ಪೇಟೆಯೂ ಸಿಗುತ್ತದೆ. ಕೈಗಾರಿಕಾಭಿವೃದ್ಧಿಯೂ ತೀವ್ರವಾಗುತ್ತದೆ. ಆದರೆ ಎಲ್ಲಾ ಸಣ್ಣ ಕೈಗಾರಿಕೆಗಳನ್ನು ದೊಡ್ಡ ಕೈಗಾರಿಕೆಗಳ ಉಪ ಉದ್ದಿಮೆಗಳಾಗಿ ಬೆಳೆಸುವುದು ಅಸಾಧ್ಯ. ಕೆಲವು ಕ್ಷೇತ್ರಗಳಲ್ಲಿ ಈ ಎರಡೂ ಬಗೆಯ ಕೈಗಾರಿಕೆಗಳ ನಡುವೆ ತಪ್ಪಿಸಲಾರದಂತಹ ತೀವ್ರ ಪೈಪೋಟಿ ಇರುತ್ತದೆ. ಇನ್ನು ಕೆಲವು ಕ್ಷೇತ್ರಗಳಲ್ಲಿ ಇವುಗಳ ನಡುವೆ ಪೈಪೋಟಿ ಇಲ್ಲದೆ ಸೌಹಾರ್ದತೆ ಬೆಸೆದಿರುತ್ತದೆ. ಆದರೆ ನಮ್ಮ ದೇಶದಲ್ಲಿ ಹಲವಾರು ಗೃಹ ಮತ್ತು ಸಣ್ಣ ಕೈಗಾರಿಕೆಗಳನ್ನು ಬೃಹತ್ ಕೈಗಾರಿಕೆಗಳ ಉಪ ಉದ್ದಿಮೆಗಳಾಗಿ ಅಭಿವೃದ್ಧಿ ಪಡಿಸಲು ಅವಕಾಶವಿದೆ. ಈ ದಿಸೆಯಲ್ಲಿ ಸಣ್ಣ ಕೈಗಾರಿಕೆಗಳು ದೊಡ್ಡ ಕೈಗಾರಿಕೆಗಳಿಗೆ ಪೂರಕವಾಗಿ ಕೆಳಕಂಡಂತೆ ಕಾರ್ಯ ನಿರ್ವಹಿಸಬಹುದು.

1 ಸಣ್ಣ ಕೈಗಾರಿಕೆಗಳು ಅರ್ಧ ಸಿದ್ಧವಸ್ತುಗಳ ಉತ್ಪಾದನೆಯನ್ನು ಕೈಗೊಳ್ಳಬಹುದು. ಬೃಹತ್ ಕೈಗಾರಿಕೆಗಳು ಆ ಅರ್ಧ ಸಿದ್ಧ ವಸ್ತುಗಳನ್ನು ಪೂರ್ಣಸಿದ್ಧ ವಸ್ತುಗಳನ್ನಾಗಿ ಮಾಡಬಹುದು.

2 ಬೈಸಿಕಲ್, ರೇಡಿಯೋ ಮುಂತಾದವುಗಳ ಬಿಡಿಭಾಗಗಳನ್ನು ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಉತ್ಪಾದಿಸಬಹುದು.

3 ಕೃಷಿ ಉಪಕರಣಗಳು, ಮನೆಕೆಲಸದ ಪಾತ್ರೆಗಳು, ಸಿದ್ಧ ಉಡುಪುಗಳ ತಯಾರಿಕೆಯನ್ನು ಇವು ಕೈಗೊಳ್ಳಬಹುದು. ರಿಪೇರಿ ಮೊದಲಾದ ಕೆಲಸಗಳಿಗೆ ಸಣ್ಣ ಕಾರ್ಯಗಾರಗಳನ್ನು (Workshop) ಸ್ಥಾಪಿಸಬಹುದು. ಈ ರೀತಿ ತ್ವರಿತ ಕೈಗಾರಿಕಾಕರಣಕ್ಕೆ ಪೂರಕ ಉದ್ದಿಮೆಗಳು ಅಗತ್ಯ.

ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲಾ ಹಳ್ಳಿಗಳಿಗೂ ವಿದ್ಯುಚ್ಛಕ್ತಿಯ ಬೆಳವಣಿಗೆಯಾಗಿದ್ದು ಸಣ್ಣ ಕೈಗಾರಿಕೆಗಳಿಗೆ ವಿದ್ಯುಚ್ಛಕ್ತಿಯ ಸರಬರಾಜು ಮಾಡಲಾಗುತ್ತಿದೆ. ಲೋಹಕೆಲಸ ಹಾಗೂ ಯಂತ್ರ ಕೈಗಾರಿಕೆಯಲ್ಲಿ ಸಮರ್ಥವಾದ ಸಣ್ಣ ಕೈಗಾರಿಕೆಗಳಿಗೆ ಇಂದು ಒಳ್ಳೆಯ ಅವಕಾಶವಿದೆ. ಆಹಾರವನ್ನು ಸಿದ್ಧಪಡಿಸುವುದು, ಕೃಷಿಯ ಉಪಕರಣಗಳನ್ನು ತಯಾರಿಸುವುದು, ಪ್ಲಾಸ್ಟಿಕ್ ಸಾಮಾನುಗಳು, ಬಟ್ಟೆಗಳನ್ನು ಸಿದ್ಧಪಡಿಸುವುದು, ಚರ್ಮ ಹದಮಾಡುವುದು ಮುಂತಾದ ಕ್ಷೇತ್ರಗಳಲ್ಲಿ ಸಣ್ಣ ಕೈಗಾರಿಕೆಗಳು ವಿಶಿಷ್ಟ ಸ್ಥಾನ ಪಡೆದಿವೆ. ಬಂಡವಾಳ ಸರಕುಗಳ ಮತ್ತು ಗ್ರಾಹಕರ ವಸ್ತುಗಳ ಉತ್ಪಾದನೆಯಲ್ಲಿ ಇವು ಮಹತ್ವದ ಪಾತ್ರಹೊಂದಿವೆ. ಬೃಹತ್ ಕೈಗಾರಿಕೆಗಳಿಗೆ ಬೇಕಾಗುವ ವಸ್ತುಗಳನ್ನು ಜೋಡಿಸುವ, ಮಿಶ್ರಮಾಡುವ, ಹದಮಾಡುವ ಕೆಲಸಗಳನ್ನು ಕೈಗೊಳ್ಳುವುದರ ಮೂಲಕ ಸಣ್ಣ ಕೈಗಾರಿಕೆಗಳು ನೆರವಾಗುತ್ತವೆ. ಜನಶಕ್ತಿಯ ವೃಥಾ ವ್ಯಯ ರಾಷ್ಟ್ರದ ಭದ್ರಭವಿಷ್ಯಕ್ಕೆ ಆತಂಕಕಾರಿ. ಆದ್ದರಿಂದ ಜನರ

ವಿರಾಮಕಾಲದ ಸದುಪಯೋಗಕ್ಕೆ ತಕ್ಕಂತಹ ಕೈಗಾರಿಕೆಗಳು ಬಹು ಅವಶ್ಯ. ಅಂದರೆ ಕೈಗಾರಿಕೆಗಳನ್ನು ಕೃಷಿ ಉತ್ಪಾದನೆಗೆ ಅನ್ವಯವಾಗುವಂತೆ ಸ್ಥಾಪಿಸಬೇಕು. ಆಗಲೇ ಗ್ರಾಮಾಂತರ ಪ್ರದೇಶಗಳ ಆರ್ಥಿಕ ಸ್ಥಿತಿ ಸುಧಾರಿಸಿ, ಬಳಕೆದಾರರ ಆಹಾರ ಸಮಸ್ಯೆ ನೀಗಲು ಸಾಧ್ಯ. ಬಡರೈತರ ಆರ್ಥಿಕ ಸುಸ್ಥಿತಿಗೆ, ಕೃಷಿಯ ಪುನರುಜ್ಜೀವನಕ್ಕೆ ಇದ ರಿಂದ ಹೊಸ ಚೇತನ ದೊರೆಯಬಲ್ಲದು. ಗ್ರಾಮಜೀವನಕ್ಕೆ ಹೊಸ ತಿರುವು ನೀಡಿ, ಅವುಗಳ ಭದ್ರಭವಿಷ್ಯಕ್ಕೆ ಪೂರಕವಾಗಬಲ್ಲ, ಅವುಗಳನ್ನು ಸುಖ-ಸೌಭಾಗ್ಯಗಳಿಂದ ತುಂಬಿ ತುಳುಕಿಸಬಲ್ಲ ಶಕ್ತಿ, ಸಾಮರ್ಥ್ಯಗಳನ್ನು ಗೃಹ ಹಾಗೂ ಸಣ್ಣ ಕೈಗಾರಿಕೆಗಳು ಮಾತ್ರ ಹೊಂದಿವೆ. ಈ ಕೈಗಾರಿಕೆಗಳಿಂದ ಸಂತ್ರಸ್ತ ಪ್ರಜೆ ಸ್ವಾವಲಂಬಿಯಾಗಲು ಸಾಧ್ಯ. ನಿರುದ್ಯೋಗಿಗಳು ಪರೋಪಜೀವಿ ವರ್ಗಕ್ಕೆ ಸೇರದೆ ಸ್ವತಃ ಉತ್ಪಾದಕರಾಗು ವುದು ಇದೊಂದು ಮಾರ್ಗದಿಂದ. ಇದು ಗಾಂಧೀಜಿ ಪ್ರತಿಪಾದಿಸಿದ ಭಾರತೀಯ ಸಮಾಜವಾದದ ವ್ಯಕ್ತಿ ಸ್ವರೂಪ. ಆದ್ದರಿಂದ ಈ ನೀತಿಗೆ ಸಕಲ ಸಮರ್ಥನೆ ನೀಡು ವುದು ಪ್ರಜ್ಞಾವಂತರ ಕರ್ತವ್ಯ.

# ಇತಿಹಾಸದ ಕುಖ್ಯಾತ ವಂಚಕ ಕ್ರೂಗರ್

—ಪ. ರಾಮಕೃಷ್ಣಶಾಸ್ತ್ರಿ

ಈ ಶತಮಾನದಲ್ಲೇ, ಹತ್ತು ವರ್ಷಗಳ ಕಾಲ ಜಗತ್ತಿನ ಷೇರು ಪೇಟೆಯನ್ನು ಕೈವಶಮಾಡಿಕೊಂಡು, ಅತ್ಯಂತ ಬಲಶಾಲಿ ವ್ಯಕ್ತಿಗಳ ಪೈಕಿ ಮೂರನೆಯವನೆನಿಸಿದ ಐವರ್ ಕ್ರೂಗರ್ ಕೊನೆಗೆ ಬಂದೂಕಿನಿಂದ ಗುಂಡಿಟ್ಟುಕೊಂಡು ಸತ್ತ. ಜರ್ಮನ್, ಫ್ರೆಂಚ್ ಮೊದಲಾದ ಹಲವಾರು ಸರಕಾರಗಳಿಗೆ ಸಾಲ ಕೊಟ್ಟವನೆಂದು ಖ್ಯಾತಿಪಡೆದ ಈ ಮಹಾಶಯ ಅತಿ ದೊಡ್ಡ ವಂಚಕನೆಂದು ಅವನ ಮರಣಾನಂತರ ಬಯಲಾದಾಗ ಅನೇಕರು ಹುಬ್ಬೇರಿಸಿದರು.

ಸ್ವೀಡನಿನ ಕಾಲ್ಮರ್ ಎಂಬ ಸಣ್ಣ ನಗರದ ಮಧ್ಯಮ ವರ್ಗದ ಒಂದು ಕುಟುಂಬ ದಲ್ಲಿ ೧೮೮೦ರಲ್ಲಿ ಕ್ರೂಗರ್ ಹುಟ್ಟಿದ. ಅವನ ತಂದೆ ಸ್ಟಾಕ್ ಹೋಂನಲ್ಲಿ ರಷ್ಯದ ವ್ಯಾಪಾರ ಪ್ರತಿನಿಧಿಯಾಗಿ ನೇಮಕ ಹೊಂದಿದ್ದ ಗೌರವಾನ್ವಿತ ವ್ಯಕ್ತಿ. ಕ್ರೂಗರ್ ತಂತ್ರಶಾಸ್ತ್ರ ಪರಿಣತನಾಗಿ ಕಟ್ಟಡ ನಿರ್ಮಾಣದಲ್ಲಿ ಕ್ರಾಂತಿಕಾರಕ ಪದ್ಧತಿಗಳನ್ನು ರೂಢಿಗೆ ತಂದ. ದಕ್ಷಿಣ ಆಫ್ರಿಕ, ಅಮೇರಿಕ ಮತ್ತು ಅನಂತರ ಸ್ವೀಡನಿನಲ್ಲಿ ಅವನ ಪ್ರತಿಭಾಶಕ್ತಿ ಮಿಂಚಿತು. ಆದರೆ ಕ್ರೂಗರ್‌ಗೆ ಅದರಿಂದ ತೃಪ್ತಿ ಸಿಗಲಿಲ್ಲ. ತಾನೊಂದು ಉದ್ಯಮದಲ್ಲಿ ಪ್ರಭುತ್ವ ಸ್ಥಾಪಿಸಬೇಕೆಂದು ಆತ ಆಶಿಸಿದ. ಆಗ ಬೆಂಕಿಪೆಟ್ಟಿಗೆ ಅವನ ದೃಷ್ಟಿಗೆ ಬಿತ್ತು.

ಆಗ ಬೆಂಕಿಪೆಟ್ಟಿಗೆ ತಯಾರಿಸುವ ದೇಶಗಳಲ್ಲಿ ಸ್ವೀಡನ್ ಪ್ರಮುಖವಾಗಿತ್ತು. ಗಂಡಸರಂತೆ ಹೆಂಗಸರೂ ಧೂಮಪಾನದ ಚಟಕ್ಕೆ ಬಲಿಯಾಗಿದ್ದುದರಿಂದ ಎಲ್ಲರಿಗೂ ಬೆಂಕಿಪೆಟ್ಟಿಗೆ ಅನಿವಾರ್ಯವಾಗಿತ್ತು. ಜಗತ್ತಿನ ದೊಡ್ಡ ರಾಷ್ಟ್ರಗಳ ಮದ್ದಿನ ಸಂಗ್ರಹ ಗಳೆಲ್ಲ ಸ್ಫೋಟಕ ಸಲಕರಣೆಗಾಗಿ ಮುಗಿದಿದ್ದುವು. ತಟಸ್ಥ ರಾಷ್ಟ್ರವೆನಿಸಿದ ಸ್ವೀಡನಿ ನಲ್ಲಿ ಬೆಂಕಿಪೆಟ್ಟಿಗೆ ತಯಾರಿಕೆಗೆ ಬೇಕಾಗುವ ಮಿದುವಾದ ಮರಗಳೂ ಮದ್ದುಗಳೂ ವಿಪುಲವಾಗಿತ್ತು. ಕ್ರೂಗರ್ ತನ್ನಲ್ಲಿದ್ದ ಹಣವನ್ನು ಸೇರಿಸಿ ಒಂದು ಕಾರ್ಖಾನೆ ಯನ್ನು ಕೊಂಡುಕೊಂಡ. ಅನಂತರ ಎರಡು, ಮೂರು ಹೀಗೆಯೇ ದೇಶದ ಎಲ್ಲಾ ಬೆಂಕಿಪೆಟ್ಟಿಗೆ ಕಾರ್ಖಾನೆಗಳಿಗೂ ಅವನೇ ಒಡೆಯನೆನಿಸಿದ.

ಆ ಕಾಲದಲ್ಲಿ ಯೂರೋಪಿನ ರಾಷ್ಟ್ರಗಳು ಯುದ್ಧದ ದಳ್ಳುರಿಯಲ್ಲಿ ಸಿಲುಕಿ ಬೆಂದಿದ್ದುವು. ಜರ್ಮನಿಯಲ್ಲಿ ಕಮ್ಯೂನಿಸಂ ಕಾಲಿರಿಸಿತ್ತು. ಆಸ್ಟ್ರಿಯದಲ್ಲಿ ಕಾರ್ಮಿಕ

ಚಳವಳಿ ಆರಂಭವಾಗಿತ್ತು. ಅರ್ಥ ವ್ಯವಸ್ಥೆಗೆ ಪೂರಕವಾದ ಉದ್ಯೋಗಗಳಿರಲಿಲ್ಲ. ಆಗ ಆ ದೇಶಗಳೂ ಆರ್ಥಿಕವಾಗಿ ಸಮರ್ಥವಾಗಿರುವ ದೇಶಗಳಿಂದ ಸಾಲವನ್ನು ಅಪೇಕ್ಷಿಸಿದುವು. ಆಗ ಕ್ರೂಗರ್ ತಾನು ಸಾಲ ಕೊಡುವುದಾಗಿ ಎದೆ ತಟ್ಟಿ ಮುಂದೆ ಬಂದ. ಗ್ರೀಸ್, ಯುಗೋಸ್ಲಾವಿಯ, ಪೋಲಂಡ್, ಲಾತ್ವಿಯ, ಇಸ್ಟೋನಿಯ, ಹಂಗರಿಗಳು ಅವನಿಂದ ಸಾಲ ಪಡೆದು ತಮ್ಮ ದೇಶಗಳ ಬೆಂಕಿಪೆಟ್ಟಿಗೆ ಉತ್ಪಾದನೆಯ ಯಜಮಾನಿಕೆಯನ್ನು ಅವನಿಗೊಪ್ಪಿಸಿದುವು. ಅವನು ಕೊಟ್ಟ ಸಾಲದ ಪ್ರತಿಫಲವಾಗಿ ಜರ್ಮನಿಯು ರಷ್ಯದಿಂದ ಬೆಂಕಿಪೆಟ್ಟಿಗೆ ತರಿಸುವುದನ್ನು ನಿಲ್ಲಿಸಿತು. ಕ್ರೂಗರ್ ಕೊಟ್ಟ ಭಾರೀ ಸಾಲದಿಂದಾಗಿ ಫ್ರಾನ್ಸ್ ಉರುಳದೆ ಉಳಿದುಕೊಂಡಿತು. ದಕ್ಷಿಣ ಅಮೇರಿಕದ ಬೆಂಕಿಪೆಟ್ಟಿಗೆ ಉದ್ಯಮಕ್ಕೂ ಕ್ರೂಗರ್ ಒಡೆಯನಾದ ಪ್ರಪಂಚದ ಪ್ರತಿಶತ ೬೫ ರಷ್ಟು ಈ ಉದ್ದಿಮೆ ಕ್ರೂಗರನ ಕೈವಶವಾಗಿತ್ತು—(೧೯೨೦ರ ಹೊತ್ತಿಗೆ) ಭಾರತದಲ್ಲಿ ವಿಮ್ಕೊ ಬೆಂಕಿಪೆಟ್ಟಿಗೆ ಕಾರ್ಖಾನೆ ಕ್ರೂಗರನ ಪ್ರಾಬಲ್ಯದಿಂದಲೇ ಸ್ಥಾಪನೆಗೊಂಡಿತು.

ಎಲ್ಲಾ ದೇಶಗಳಲ್ಲೂ ಕ್ರೂಗರ್ ಬೆಂಕಿಪೆಟ್ಟಿಗೆಯ ಬೆಲೆ ಏರಿಸಿ ಬಂದ ಅಧಿಕ ಲಾಭದಲ್ಲಿ ಆಯಾ ಸರಕಾರಗಳಿಗೂ ಸಾಲು ಕೊಟ್ಟ ಅನಂತರ ಅದೇ ದೇಶಗಳಲ್ಲಿ ಕೊಳ್ಳಲು ಸುಲಭವಾದ ವಹಿವಾಟುಗಳನ್ನು ಒಂದೊಂದಾಗಿ ಕೊಂಡುಕೊಂಡ. ೪೦೦ ಕ್ಕಿಂತ ಹೆಚ್ಚು ಕಂಪೆನಿಗಳನ್ನು ಸ್ಥಾಪಿಸಿ, ಗನಿಗಳೂ, ಕೃಷಿಭೂಮಿಗಳು, ರೈಲು, ಹೋಟೆಲು ಎಲ್ಲಾ ತನ್ನದಾಗಿಸಿಕೊಂಡ. ನಿಜ ಸಂಗತಿಯೆಂದರೆ ಒಂದು ಅಲಂಕೃತ ಕಟ್ಟಡದಲ್ಲಿ ಅವನ ಕಂಪೆನಿಯ ನಾಮಫಲಕವಿತ್ತೇ ಹೊರತು ಯಾರನ್ನೂ ಕ್ರೂಗರ್ ಕೆಲಸಕ್ಕೆ ನೇಮಿಸಿಕೊಂಡಿರಲಿಲ್ಲ. ದೊಡ್ಡ ದೊಡ್ಡ ಲೆಕ್ಕಪುಸ್ತಕಗಳಲ್ಲಿ ಒಂದು ಕಂಪೆನಿಯಿಂದ ಇನ್ನೊಂದು ಕಂಪೆನಿಗೆ ಕೋಟಿಗಟ್ಟಲೆ ಹಣ ಸಾಲ ಕೊಟ್ಟಿದೆ ಎಂದೂ ಆ ಕಂಪೆನಿಯಲ್ಲಿ ಆ ಹಣ ಇಂಥ ಬಾಬಿಗೆ ವೆಚ್ಚವಾಗಿದೆಯೆಂದೂ ಬರೆದಿಡುತ್ತಿದ್ದ. ಅದನ್ನು ನೋಡಿ ಸರಕಾರಗಳು ಲಾಭದಾಯಕ ಉದ್ಯಮಗಳನ್ನು ಅವನ ಹತೋಟಿಗೆ ಒಪ್ಪಿಸಿಬಿಡುತ್ತಿದ್ದುವು. ಈ ಸಾಲವ ಲೆಕ್ಕ ಶುದ್ಧ ಕಾಲ್ಪನಿಕ ಎಂಬುದು ಯಾರಿಗೂ ತಿಳಿಯಲಿಲ್ಲ.

ಇದರಿಂದಾಗಿ ಕ್ರೂಗರನ ಪ್ರಭಾವ ಮುಂದುವರೆಯಿತು. ಅವನ ಕಂಪೆನಿಗಳಲ್ಲಿ ಕೋಟಿಗಟ್ಟಳೆ ಹಣ ತೊಡಗಿಸಲು ನ್ಯೂಯಾರ್ಕಿನ ಅತಿ ಚಾಣಾಕ್ಷ ಬ್ಯಾಂಕುಗಳು ಮುಂದೆ ಬಂದುವು. ಪೋಲಂಡಿನ ಅರ್ಥ ಸಚಿವರು ತನ್ನ ದೇಶದಲ್ಲಿ ಒಂದು ಅಡಮಾನ ಬ್ಯಾಂಕ್ ಸ್ಥಾಪಿಸುವ ಬಗ್ಗೆ ಸಲಹೆ ಪಡೆಯಲು ಸ್ಟಾಕ್ ಹೋಮಿನಲ್ಲಿದ್ದ ಅವನ ಬಳಿಗೆ ಬಂದರು. ಹಲವು ಸರಕಾರಗಳು ಅವನ ಸ್ನೇಹಹಸ್ತ ಯಾಚಿಸಿದುವು. ಆಡಳಿತ ಪ್ರಭೃತಿಗಳು ಅವನ ಸ್ನೇಹವನ್ನು ಅಮೂಲ್ಯವೆಂದೇ ಭಾವಿಸಿದ್ದರು. ಫ್ರಾನ್ಸ್ ಸರಕಾರ ಕ್ರೂಗರನಿಗೆ "ಲೀಜನ್ ಆಫ್ ಆನರ್" ಪ್ರಶಸ್ತಿ ನೀಡಿ ಗೌರವಿಸಿತು. ಪತ್ರಿಕೆಗಳು ಅವನನ್ನು ಮುಕ್ತಕಂಠದಿಂದ ಹೊಗಳುತ್ತಿದ್ದುವು.

೧೯೨೯ ರಲ್ಲಿ ವಾಲ್‌ಸ್ಟ್ರೀಟ್‌ನ ಷೇರುಪೇಟೆ ಕುಸಿದು ಹೋಯಿತು. ಆಗ ಕ್ರೂಗರ್ ಅಮೇರಿಕೆಗೆ ತೆರಳಿ, ಅಧ್ಯಕ್ಷ ಹೂವರ್‌ಗೆ ಯಾವುದಕ್ಕೂ ಭಯಪಡಬೇಕಾಗಿಲ್ಲವೆಂದು ಧೈರ್ಯ ತುಂಬಿದ. ಆದರೆ ಸ್ವತಃ ಕ್ರೂಗರನಿಗೆ ಅದರಿಂದ ವ್ಯಾಪಾರಿ ಮುಗ್ಗಟ್ಟು ತಲೆದೋರಿತು. ಅವನೇನೂ ಹೆದರದೆ ಸಣ್ಣ ಗಲ್ಲಿಯೊಂದರಲ್ಲಿ ಮುದ್ರಣಾಲಯವೊಂದನ್ನು ಸ್ಥಾಪಿಸಿ, ಇಟಾಲಿಯನ್ ಸರಕಾರದ ಸುಮಾರು ೪೨ ಕೋಟಿ ರೂಪಾಯಿ ಬೆಲೆಯ ಸಾಲಪತ್ರಗಳನ್ನೂ ಹುಂಡಿಗಳನ್ನೂ ತಯಾರಿಸಿದ. ಆ ದೇಶದ ಸಚಿವರು, ಬ್ಯಾಂಕುಗಳ ಡೈರೆಕ್ಟರರು ಅವನಿಗೆ ಈ ಮೊದಲೇ ಬರೆದ ಪತ್ರಗಳಿಂದ ಇವರ ಸಹಿಗಳ ನಕಲಿ ಬ್ಲಾಕುಗಳನ್ನು ತಯಾರಿಸಿ ಅವುಗಳಲ್ಲಿ ಮುದ್ರಿಸಿದ. ಆ ಸಹಿಗಳಲ್ಲಿ ಇಟಾಲಿಯನ್ ಸರ್ವಾಧಿಕಾರಿ ಮುಸೊಲಿನಿಯ ಸಹಿ ಕೂಡ ಇತ್ತು. ಅದನ್ನು ಕಂಡು ವಾಲ್‌ಸ್ಟ್ರೀಟಿನ ಬ್ಯಾಂಕುಗಳು ಕ್ರೂಗರನಿಂದ ಇಟಾಲಿಯನ್ ಸರಕಾರ ಕೋಟಿಗಟ್ಟಲೆ ಸಾಲ ಪಡೆದಿದೆ ಎಂದು ನಂಬಿದುವು. ೧೯೩೧ ರಲ್ಲಿ ಜಗತ್ತಿನ ಬಲಶಾಲಿ ರಾಷ್ಟ್ರಗಳು ಆರ್ಥಿಕವಾಗಿ ಸೋತಾಗ ಈ ಮಹಾಶಯನೊಬ್ಬನಿಂದಲೇ ತಾವು ಬದುಕಬಹುದೆಂದು ಅವನ ಕೈಕಾಲು ಹಿಡಿದುವು.

ಅಮೇರಿಕದ ಆರ್ಥಿಕ ವಹಿವಾಟಿನಲ್ಲಿ ಪ್ರಬಲನಾಗಿದ್ದ ಜೆ. ಪಿ. ಮಾರ್ಗನ್ ಮಾತ್ರ ಕ್ರೂಗರನನ್ನು ಸಂಶಯಿಸಿದ. ಆತನು ನೇಮಿಸಿದ ರಹಸ್ಯಚಾರರು ಕ್ರೂಗರನ ಬೆಂಬತ್ತಿ ಅವನು ಮಾಡಿದ ಮಹಾಮೋಸಗಳನ್ನು ಬಯಲಿಗೆಳೆದರು. ೧೯೩೨ ರ ಒಂದು ದಿನ ಪ್ಯಾರಿಸ್ಸಿನ ವಿಕ್ಟರ್ ಇಮ್ಯಾನುಯೆಲ್ ರಸ್ತೆಯಲ್ಲಿದ್ದ ತನ್ನ ಮನೆಯಲ್ಲಿ ಸ್ವತಃ ಗುಂಡಿಟ್ಟುಕೊಂಡು ಕ್ರೂಗರ್ ಪೊಲೀಸರ ಆತಿಥ್ಯದಿಂದ ಶಾಶ್ವತವಾಗಿ ತಪ್ಪಿಸಿಕೊಂಡ. ಅವನು ಸತ್ತಿರಲಿಲ್ಲವೆಂದೂ ಪೂರ್ಣವಾಗಿ ತನ್ನನ್ನೇ ಹೋಲುವ ಗೊಂಬೆಗೆ ಗುಂಡಿಟ್ಟು ಸುಮಾತ್ರಾಕ್ಕೆ ಓಡಿಹೋಗಿ ವೇಷಾಂತರ ಮಾಡಿಕೊಂಡಿದ್ದ; ಅಲ್ಲಿ ವಿಶೇಷವಾದ ಹವಾನಾ ಸಿಗರೇಟು ಉದ್ಯಮಕ್ಕೆ ಕೈಹಾಕಿದನೆಂದೂ ವದಂತಿಗಳಿದ್ದುವು.

ಅಂತೂ ಕ್ರೂಗರನ ನಿರ್ಗಮನದೊಂದಿಗೇ ಪಾಶ್ಚಾತ್ಯ ದೇಶಗಳಲ್ಲಿ ಆತ ಕಟ್ಟಿದ್ದ ಆರ್ಥಿಕ ಕೋಟೆಗಳು ಕುಸಿದುಬಿದ್ದುವು. ವಿಚಾರಣಾ ಆಯೋಗಗಳು ಅವನಿಂದ ಲಕ್ಷಾಂತರ ಜನಕ್ಕೆ ಮೋಸವಾಗಿದೆ ಎಂದು ಪ್ರಕಟಿಸಿದುವು. ಗಣ್ಯ ವ್ಯಕ್ತಿಗಳನೇಕರ ಮರ್ಯಾದೆಯೂ ಬೀದಿಪಾಲಾಗಿತ್ತು. ಬ್ಯಾಂಕುಗಳು ಕ್ರೂಗರನ ಕಂಪನಿಗಳಲ್ಲಿ ತೊಡಗಿಸಿದ ಹಣ ಬಿಡಿಗಾಸೂ ಸಿಕ್ಕಲಿಲ್ಲ.

ಪಾಶ್ಚಾತ್ಯ ರಾಷ್ಟ್ರಗಳ ಪಾಲಿಗೆ ಧರ್ಮರಾಯ, ಬೆಂಕಿಪೆಟ್ಟಿಗೆ ದೊರೆ, 'ಬ್ಲಡೀ ಸ್ವೀಡ್', ಕ್ರಾಂತಿಯಿಂದ ಜರ್ಮನಿಯಿಂದ ಕಾಪಾಡಿದ ಮಹಾತ್ಮ ಮುಂತಾಗಿ ಶ್ಲಾಘಿಸಲ್ಪಟ್ಟ ಕ್ರೂಗರ್ ಸತ್ತಮೇಲೆ ಇತಿಹಾಸದ 5 ಮಂದಿ ಸುಪ್ರಸಿದ್ಧ ವಂಚಕಶ್ರೇಷ್ಠರಲ್ಲಿ ಒಬ್ಬನೆನಿಸಿದ. ಪ್ಯಾರಿಸ್, ಬರ್ಲಿನ್‌ಗಳಲ್ಲಿ ಅವನಿಗೆ ಅಗಣಿತ ಸಂಖ್ಯೆಯಲ್ಲಿ ಪ್ರೇಯಸಿಯರೂ ಅವರಿಂದ ಜನಿಸಿದ ಮಕ್ಕಳೂ ಇದ್ದರು.

## ಸಿದ್ಧಗಂಗಾ ಮಾಸಿಕ ಪತ್ರಿಕೆಯ ಮಾಲಿಕತ್ವ ಮತ್ತು ಇತರ ವಿವರಗಳ ಸಂಬಂಧಪಟ್ಟ ಮಾಹಿತಿ

ಫಾರಂ ೪

| | | |
|---|---|---|
| ೧. | ಪ್ರಕಟಣೆಯ ಸ್ಥಳ : | ಶ್ರೀ ಸಿದ್ಧಗಂಗಾ ಮಠ |
| ೨. | ಪ್ರಕಟವಾಗುವ ಅವಧಿ : | ಮಾಸಿಕ |
| ೩. | ಮುದ್ರಣ ಭಾಷೆ : | ಕನ್ನಡ |
| ೪. | ಮುದ್ರಕರ ಹೆಸರು : | ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು |
| | ರಾಷ್ಟ್ರೀಯತೆ : | ಭಾರತೀಯ |
| | ವಿಳಾಸ : | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ (ಕರ್ನಾಟಕ) |
| ೫. | ಪ್ರಕಾಶಕರ ಹೆಸರು : | ಹೆಚ್. ಬಿ. ಗಂಗಾಧರಯ್ಯ, |
| | ರಾಷ್ಟ್ರೀಯತೆ : | ಭಾರತೀಯ |
| | ವಿಳಾಸ : | ಶ್ರೀ ಸಿದ್ದಗಂಗಾ ಮಠ<br>ತುಮಕೂರು ಜಿಲ್ಲಾ, (ಕರ್ನಾಟಕ) |
| ೬. | ಸಂಪಾದಕರ ಹೆಸರು : | ಶ್ರೀ ಪಂ॥ ಚನ್ನಪ್ಪ ಎರೇಸೀಮೆ |
| | ರಾಷ್ಟ್ರೀಯತೆ : | ಭಾರತೀಯ |
| | ವಿಳಾಸ : | ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ, (ಕರ್ನಾಟಕ) |
| ೭. | ಪತ್ರಿಕೆಯ ಮಾಲೀಕರು : | ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ಜಿಲ್ಲಾ, (ಕರ್ನಾಟಕ) |
| ೮. | ನೊಂದಣಿ ಸಂಖ್ಯೆ : | ಕೆ. ಆರ್. ಎನ್. ಕ್ಯೂ. ೯. |

ನಾನು ಹೆಚ್. ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.

೧ ಮಾರ್ಚಿ, ೧೯೮೩ (ಸಹಿ) ಹೆಚ್. ಬಿ. ಗಂಗಾಧರಯ್ಯ
ಸಿದ್ಧಗಂಗಾ ಮಠ ಪ್ರಕಾಶಕ

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ. ಶ್ರೀ ಸಿದ್ಧಗಂಗಾ ಕ್ಷೇತ್ರ.